ಶ್ರೀ

ಆನಂದ ಗ್ರಂಥಮಾಲಾ, ಹುಬ್ಬಳ್ಳಿ— ವರುಷ ೧ — ಕುಸುಮ — ೧

# ಅರ್ಪಣೆ

( ಪೌರಾಣಿಕ ಕಥಾಸಂಕಲನ—೧ )

[ ಶ್ರೀ. ಅ. ನ. ಕೃಷ್ಣರಾಯರ ಮುನ್ನುಡಿಯೊಂದಿಗೆ ]

ಪಿ. ವೆಂಕೋಬಾಚಾರ್ಯ

ಜನೆವರಿ ೧೯೫೦ ● ಬೆಲೆ : ೧—೮—೦

ಸಲಹೆಗಾರರು

ಶ್ರೀ. ಎಸ್. ಆರ್. ಮಳಗಿ, .... ಎ., ಬಿ. ಟಿ.

ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ., ಬಿ. ಟಿ

ಶ್ರೀ. ಆರ. ಎ. ಕುಲಕರ್ಣಿ, ಎಂ. ಎ.

ಶ್ರೀ. ದೇಸಾಯಿ ದತ್ತಮೂರ್ತಿ



ಪ್ರಕಾಶಕರು :

ಪಿ. ವೆಂಕೋಬಾಚಾರ್ಯ

ಹುಬ್ಬಳ್ಳಿ.

ಮುದ್ರಕರು

ಶೇ. ಗೋ. ಕುಲಕರ್ಣಿ

ಸಾಧನ ಮುದ್ರಣಾಲಯ, ಧಾರವಾಡ

# ಮುನ್ನುಡಿ

". . if we would seek for the essential spirit of French Literature, where shall we discover it? In its devotion to truth? In its love of rhetoric? In its clarity? In its generalizing power? All these qualities are peculiarly its own, but, beyond and above them, there is another which controls and animates the rest The one high principle which, through so many generations, has guided like a star the writers of France is the principle of deliberation, of intention, of a conscious search for ordered beauty, an unwavering, an indomitable pursuit of the endless glories of art"

—*Lytton Strachy*

ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಫ್ರಾನ್ಸ್ ದೇಶದ ಸಾಹಿತ್ಯ ನೂತನ ಮಾರ್ಗವನ್ನಾವಿಷ್ಕರಿಸಿಕೊಂಡು, ಜಗತ್ತಿನ ಸಾಹಿತ್ಯದ ಮೇಲೆ ವಿಶಿಷ್ಟ ಪ್ರಭೆಯನ್ನು ಬೀರಿತು ಈ ಕ್ರಾಂತಿಯ ಮಹಾ ನಾಯಕರು ಮೋಪಸಾ, ಫ್ಲಾಬೋ, ಜೋಲಾ ಸೌಂದರ್ಯಾರಾಧಕರಾದ ಫ್ರೆಂಚ ಜನ ಮೊದಲನೆಯ ಸಲ ಈ ತ್ರಿಮೂರ್ತಿಗಳ ಪ್ರಭಾವದಿಂದ ತಮ್ಮ ಅಂತ ರಂಗ ಜೀವನ ಸಂಸ್ಕೃತಿಯ ಸತ್ಯ ಸ್ವರೂಪವನ್ನು ಕಾಣತೊಡಗಿದರು ಜೀವನವೆಲ್ಲ ವಸಂತ ಋತುವೆಂದು ಭಾವಿಸಿ ಮದ್ಯ ಮಾನಿನಿಯರ ಮತ್ತ ವಿಲಾಸದಲ್ಲಿ, ಅವರ ರೂಪ ಲಾವಣ್ಯ ಧ್ಯಾನದಲ್ಲಿ ಲೀನವಾಗಿದ್ದ ಜನಾಂಗ ವನ್ನು ಈ ಮೂವ್ವರ ಕೃತಿಗಳು ಹೊಡೆದೆಬ್ಬಿಸಿ ರುದ್ರಗಂಭೀರವಾದ, ವರ್ಷಾ ಕಾಲದ ಕಾರ್ಮೋಡಗಳಿಂದ ತುಂಬಿದ ಜೀವನದ ನಿತ್ಯ ಸತ್ಯತೆಯ ಕಡೆ ನೋಡುವಂತೆ ಮಾಡಿದವು ಆದರೆ ಇವರು ನೋಡಿದ ಜೀವನ ಜೀವನವೇ? ಜಗತ್ತೆಲ್ಲ ಬಾವರಿ, ನಾನಾ, ಬೆಲ್ ಅಮಿಯುಂಥ ವ್ಯಕ್ತಿಗಳಿಂದ ತುಂಬಿ ದೆಯೋ ? ಈ ಮೂವ್ವರ, ಕಲಾವಿದರ, ಜೀವನದ ವಿಗಡ ಸ್ವರೂಪವನ್ನೇ

ಎತ್ತಿ ಹಿಡಿದು ಅದಕ್ಕೆ ಭೂತಗನ್ನಡಿ ಹಾಕಿ ತೋರಿಸಲು ಪ್ರಯತ್ನಿಸಿಲ್ಲವೇ? ಎಂಬ ವಾದ ಎದ್ದಿತು. ಫ್ರೆಂಚ ಸಾಹಿತ್ಯದಲ್ಲಿ ಆದರ್ಶ ಜೀವನದ ಕೊರತೆಯಿರಲಿಲ್ಲ. ವೆರ್ಲ್ಲಾ, ಹ್ಯೂಗೋ, ಪ್ಯಾಸ್ಕಲ ಮೊದಲಾದ ಕವಿಗಳು ಜೀವನದ ರಸ ನಿಮಿಷಗಳನ್ನು ಅನ್ಯಾದೃಶವಾಗಿ ಚಿತ್ರಿಸಿದ್ದರು. ಜೀವನದ ಸಮಗ್ರ ನೋಟಕ್ಕೆ ತೊಡಗುವ ಕಲಾವಿದ ಅದರ ರಸ ಜೀವನದ ಕಡೆಗೇ ಲಕ್ಷ್ಯವಿಟ್ಟರೆ ಸಾಲದು; ವಿರಸತೆಯ ಕಡೆಗೂ ಲಕ್ಷ್ಯವಿಡಬೇಕು. ಜೀವನದಲ್ಲಿ ನಗೆ ತುಂಬಿರುವಂತೆ ಹೊಗೆಯೂ ತುಂಬಿದೆ ನಗೆಯನ್ನು ತೋರಬಲ್ಲವರು ನಗೆ ತೋರಲಿ, ಹೊಗೆಯನ್ನು ತೋರಬಲ್ಲವರು ಹೊಗೆ ತೋರಲಿ ಎರಡನ್ನೂ ಬಾಲ್ ಜಾಕಿನಂತೆ ತೋರಬಲ್ಲ ಪ್ರತಿಭಾಶಾಲಿಗಳಿದ್ದರೆ ಅವರ ಸೇವೆ ಅವ್ಯಾಹತವಾಗಿ ಸಾಗಿ ಲೋಕೋಪಕಾರ ಮಾಡಲಿ.

ಮೋಪಸಾ ರುದ್ರಗಭೀರ ಜೀವನವನ್ನು ತೋರಿಸುವಂತೆ ಸ್ನಿಗ್ಧ ಮಧುರ ಜೀವನವನ್ನೂ ತೋರಿದ್ದಾನೆ ಆದರ ಮಾನವನ ದೌರ್ಬಲ್ಯ, ಅಸಹನೆ, ಅವಿವೇಕದ ಬಗ್ಗೆ ಅವನು ಹೇಳಿರುವುದೇ ಹೆಚ್ಚು ಅವುಗಳನ್ನು ಮೋಪಸಾನಂತೆ ತಿಳಿದಿದ್ದ ಸಾಹಿತಿಗಳು ವಿರಳ. ಮಾನವನ ಅವಿವೇಕ, ಅಜ್ಞಾನ, ದೌರ್ಬಲ್ಯ ಚಿತ್ರಿಸುವಾಗ ಮೋಪಸಾನ ಲೇಖನಿ ವಜ್ರಕಠೋರವಾಗುತ್ತದೆ. ಮಾನವನ ಪತನವನ್ನು ಚಿತ್ರಿಸುವುದರಲ್ಲಿ ಮೋಪಸಾ ಹಿಗ್ಗಿ ಒಂದು ಬಗೆಯ ರಾಕ್ಷಸತೃಪ್ತಿ ಪಡೆಯುತ್ತಾನೆಯೊ ಎಂದನಿಸುತ್ತದೆ. ಸತ್ಯ ನಿಷ್ಠುರನಾದ ಲೇಖಕ ಯಾವ ಬಗೆಯ ದಾಕ್ಷಿಣ್ಯಕ್ಕೂ ಒಳಗಾಗದೆ ತಾನು ಕಂಡುಂಡುದನ್ನು ನಿರ್ವಿಕಾರದಿಂದ, ನಿರ್ಮಮತೆಯಿಂದ ಚಿತ್ರಿಸುವ ಪ್ರತಿಭೆಯನ್ನು ಮೋಪಸಾದಲ್ಲಿಯೇ ಕಾಣಬೇಕು, ಇಷ್ಟು ಕಠೋರನಾಗಿ ಕಂಡು ಬರುವ ಕವಿ ಕರುಣಾರ್ದ್ರನಾಗಿದ್ದಾನೆ ಅಪಾರ ಅಂತಃಕರಣದಿಂದ ಅವನು ತನ್ನ ಸಹಜೀವಿಗಳ ಚರ್ಯೆ, ಚರಿತೆಗಳನ್ನು ವರ್ಣಿಸುತ್ತಾನೆ.

ಮೋಪಸಾ ಬರೆದಿರುವ ಕಥೆಗಳಷ್ಟೇ ಹೃದಯಂಗಮವಾಗಿದೆ ಅವನ ಜೀವನ ಕಥೆ ಅವನ ತಂದೆಯ ಕಡೆಯವರು ದಿವಾಳಿ ತೆಗೆದ ಶ್ರೀಮಂತರು; ತಾಯಿಯ ಕಡೆಯವರು ಕಲಾವಿದರಾದ ಸಾಮಾನ್ಯರು. ಶ್ರೀಮಂತಿಕೆಯ ಅಹಂಭಾವ, ಕಲೆಯ ಹೃದಯ ವೈಶಾಲ್ಯ ಎರಡೂ ಮೋಪಸಾನಲ್ಲಿ ಸಮ ಸಮವಾಗಿ ಬೆರೆತವು. ಮೋಪಸಾ ಹಾಗೂ ಹೀಗೂ ಲಾ ಪರೀಕ್ಷೆಯಲ್ಲಿ

ತೇರ್ಗಡೆ ಹೊಂದಿ ಸೈನ್ಯಕ್ಕೆ ಸೇರಿದ. ಪ್ರಷ್ಯಾ ಧಾಳಿ ಮುಗಿದ ತರುವಾಯ ನೌಕೆಯಲ್ಲಿ ಕಾರಕೂನನಾಗಿ ಸೇರಿದ ಈ ಸಂದರ್ಭದಲ್ಲಿಯೇ ಅವನಿಗೆ ಫ್ಲಾಬೋನ ಪರಿಚಯವಾದದ್ದು ತರಳಾ ಮೋಪಸಾನಲ್ಲಿ ಸುಪ್ತವಾಗಿದ್ದ ಚೇತನವನ್ನು ಫ್ಲಾಬೊ ಜಾಗ್ರತಗೊಳಿಸಿ ಅವನಿಗೆ ಅಮರತ್ವದ ಹೆದ್ದಾರಿ ತೋರಿಸಿ ಕೊಟ್ಟ ಒಮ್ಮೆ ಕೆಲ ಗೆಳೆಯರು ಜೋಲಾ ಮನೆಯಲ್ಲಿ ಔತಣಕ್ಕೆ ಸೇರಿದ್ದಾಗ ಪ್ರಷ್ಯನ್ ಯುದ್ಧದ ಮೇಲೆ ಪ್ರತಿಯೊಬ್ಬರೂ ಒಂದೊಂದು ಕಥೆ ಬರೆಯಬೇಕೆಂದು ನಿಶ್ಚಯಿಸಿದರು ಯುದ್ಧದ ಸಹಜ ಸ್ವರೂಪ ಕಥೆಯಲ್ಲಿ ಚಿತ್ರಿತವಾಗಬೇಕೆಂಬುದೇ ಕರಾರು ಮೋಪಸಾ ತನ್ನ "ಬಾಲ್ ಆಫ್ ಫ್ಯಾಟ್" ( Ball of Fat ) ಕಥೆ ಬರೆದ ಆದಕ್ಕೆ ಸಿಕ್ಕಿದ ಅಭೂತ ಪೂರ್ವ ಸ್ವಾಗತದಿಂದ ಹುರಿಗೊಂಡು ಮೋಪಸಾ ನೂರಾರು ಕಥೆಗಳನ್ನು ಬರೆಯುತೊಡಗಿದ ಮಧ್ಯೆ ಮಧ್ಯೆ ಕೆಲವು ಕಾದಂಬರಿಗಳನ್ನೂ ಬರೆದ. ತನ್ನಲ್ಲಿ ಬಹು ದಿನಗಳಿಂದ ಬೆಳೆದು ಬಂದಿದ್ದ ಗುಪ್ತರೋಗವೊಂದರ ಬಾಧೆ ತಡೆಯಲಾರದೆ ನಲವತ್ತುಮೂರನೆಯ ವಯಸ್ಸಿನಲ್ಲಿ ಆತ್ಮಹತ್ಯೆ ಮಾಡಿಕೊಂಡ

ಮೋಪಸಾನ ಕಥೆಗಳನ್ನು ಅವುಗಳ ವಸ್ತುವಿಗಾಗಿ ಓದಲು ಹೇಸು ವವರೂ ತಂತ್ರನೈಪುಣ್ಯಕ್ಕಾಗಿ ಓದಲೇಬೇಕು ಜಗತ್ತಿನ ಸಣ್ಣ ಕಥೆಗಳ ಇತಿಹಾಸದಲ್ಲಿ ಚೆಕಾಫ್, ಓ ಹೆನ್ರಿ ಮತ್ತು ಮೋಪಸಾ ತಮ್ಮದೇ ಆದ ವಿಶಿಷ್ಟ ಸ್ಥಾನಗಳಿಸಿಕೊಂಡಿದ್ದಾರೆ. ಚೆಕಾಫ್, ಓ ಹೆನ್ರಿ ತಂತ್ರದೃಷ್ಟಿಯಿಂದ ಮೋಪಸಾನಿಗೆ ಸರಿಸಮರಾಗಿ ನಿಲ್ಲಬಲ್ಲರಾದರೂ ಅವನ ಆಳವಾದ ಜೀವನ ದರ್ಶನ, ಅಂತರಂಗ ವಿಶ್ಲೇಷಣೆ ಅವರಲ್ಲಿ ಕಂಡುಬರುವುದಿಲ್ಲ ಕಥನ ಕಲೆ ಯನ್ನು ಕಲಿಯಬೇಕೆಂದಿರುವವರಿಗೆ ಮೋಪಸಾ ಮಹಾ ಗುರು

ನನ್ನ ಮಿತ್ರರಾದ ಶ್ರೀ. ಪಿ. ವೆಂಕೋಬಾಚಾರ್ಯರು ಮೋಪಸಾನ ಹದಿನೇಳು ಕಥೆಗಳನ್ನು ಅನುವಾದ ಮಾಡಿ ಕನ್ನಡಿಗರಿಗೆ ಅರ್ಪಿಸಿದ್ದಾರೆ. ಇಂಥ ಅನುವಾದಗಳಲ್ಲಿ ಎರಡು ಆಕ್ಷೇಪಣೆಗಳು ಸಹಜವಾಗಿ ಬರುತ್ತವೆ. ಮೊದಲನೆಯದಾಗಿ ಕಥೆಗಳ ಆಯ್ಕೆ, ಎರಡನೆಯದಾಗಿ ಅನುವಾದನ ಕ್ರಮ. ಮೋಪಸಾ ಬರೆದಿರುವ ಸಾವಿರಾರು ಕಥೆಗಳಲ್ಲಿ ಕೆಲವು ನೂರು ಕಥೆಗಳನ್ನು ಮೊದಲನೆಯ ವರ್ಗದವೆಂದು ಪರಿಗಣಿಸಬಹುದು. ಅವುಗಳಲ್ಲಿ ಅನುವಾದಕ

ತನ್ನ ಅಭಿರುಚಿ. ವಿಮರ್ಶೆ, ವಿಚಾರಗಳಿಗೊಪ್ಪುವ ಕಥೆಗಳನ್ನೇ ಆಯ್ದು ಕೊಳ್ಳಬೇಕಾಗುತ್ತದೆ ಹೀಗಾಗಿ 'ಇಂಥ ಕಥೆ ಸೇರಿಸಿದ್ದರೆ ಚೆನ್ನಾಗಿರುತ್ತಿತ್ತಲ್ಲಾ' ಎಂದು ಓದುಗ ಹೇಳುವುದು ತಪ್ಪುವುದಿಲ್ಲ. ಆಚಾರ್ಯರು ಮೂಲದ ಸ್ವಾರಸ್ಯ ಕೆಡದಂತೆ ಅನುವಾದನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿರುವುದಕ್ಕೆ ನಾನು ಅವರನ್ನು ಅಭಿನಂದಿಸುತ್ತೇನೆ ಕೆಲವು ಕಡೆ ಅನುವಾದ ಹೆಚ್ಚು ಸರಳವೂ, ಪಾಂಡಿತ್ಯವರ್ಜ್ಯವೂ ಆಗಿದ್ದಲ್ಲಿ ಅನುವಾದನ ಉತ್ತಮಗೊಳ್ಳುತ್ತಿರಲಿಲ್ಲವೇ ಎಂದು ವಿಚಾರ ಮಾಡದಿರಲಾರೆ

ಆಚಾರ್ಯರು ಆರಿಸಿರುವ ಕಥೆಗಳಲ್ಲಿ ಮೋಪಸಾನ ಬಹು ಮುಖ ಪ್ರತಿಭೆಯನ್ನು ಕಾಣಬಹುದು 'ಗುಣ,' 'ಕರುಳಿನ ಕೂಗು,' 'ಎಲ್ಲವೂ ಮುಗಿಯಿತು' ಕಥೆಗಳಲ್ಲಿ ಕಂಡು ಬರುವ ಅಂತರಂಗ ವಿಪ್ಲವ, 'ಚಿತ್ರಗಾರನ ಹೆಂಡತಿ' 'ಕೊಲೆಗಡಕ' ಕಥೆಗಳಲ್ಲಿ ಕಂಡು ಬರುವ ಜೀವನದ ದುರಂತ ಸತ್ಯ, 'ಕಲೆಯ ನೆನಪು,' ಕಥೆಗಳಲ್ಲಿ ಕಾವ್ಯವಿಲಾಸ, 'ಅದು ಕನಸೇ,' 'ಸತ್ತವಳ ಜೀವನದ ಗುಟ್ಟು,' ಕಥೆಗಳಲ್ಲಿ ಕಂಡು ಬರುವ ಇಮ್ಮುಖ ಜೀವನ ಮೋಪಸಾನ 'ದೃಷ್ಟಾಂತರತನ'ದ ಸಾಕ್ಷ್ಯಗಳಾಗಿವೆ.

ಮೋಪಸಾನ ಕಥೆಗಳಿಂದ ಆರಂಭವಾಗಿರುವ ಶ್ರೀ ವೆಂಕೋಬಾಚಾರ್ಯರ ಆನಂದ 'ಗ್ರಂಥಮಾಲೆ' ಇತೋಪ್ಯತಿಶಯವಾಗಿ ಅಭಿವೃದ್ಧಿಯಾಗಿ ಇಂಥ ಹತ್ತಾರು ಒಳ್ಳೆಯ, ಪುಸ್ತಕಗಳನ್ನು ಕೊಡಲಿ ಎಂದು ಹಾರೈಸುತ್ತೇನೆ. ಆಚಾರ್ಯರು ಮೋಪಸಾನ ಇತರ ಕಥೆಗಳನ್ನೂ, ಬೆಲ್ ಆಮಿ, ಪೀರೆ ಜೀನ್ ಮೊದಲಾದ ಕಾದಂಬರಿಗಳನ್ನೂ ಕನ್ನಡಿಸಿ ಕನ್ನಡ ಸಾರಸ್ವತ ಸಂಪತ್ತನ್ನೂ ಹೆಚ್ಚಿಸಲಿ ಎಂದು ಹೃತ್ಪೂರ್ವಕವಾಗಿ ಬಯಸುತ್ತೇನೆ

"ಅನ್ನಪೂರ್ಣ" ಅ. ನ. ಕೃಷ್ಣರಾಯ

**ವಿಶ್ವೇಶ್ವರಪುರಂ**

ಬೆಂಗಳೂರು ನಗರ

೩೦—೧೨—೧೯೪೪

# ನನ್ನ ಮಾತು

## (೧)

ಗಾಯ್ ಡಿ. ಮೋಪಸಾನ ಬಗ್ಗೆ ಆಂಗ್ಲ ಭಾಷೆಯಲ್ಲಿ ಅನೇಕ ವಿಚಾರ ಪರಿಪ್ಲುತ ಲೇಖನಗಳು ಹೊರಬಿದ್ದಿವೆ ಪ್ರತಿ ವರುಷವೂ ಹೊಸ ವಿವರಗಳೂ ಅವನ ಬಗ್ಗೆ ಪ್ರಕಟವಾಗಹತ್ತಿವೆ ಮರಾಠಿಯಲ್ಲಿ ಶ್ರೀ. ಅತ್ರೇಯವರ ಲೇಖನಗಳು, ಅವರ ಕಥಾನುವಾದಗಳೂ ಬಹು ಉತ್ತಮ ಬರೆಹಗಳಾಗಿವೆ ಬಹಳ ವರ್ಷಗಳ ಹಿಂದೆ ಶ್ರೀ ಸಿ ಕೆ. ವೆಂಕಟರಾಮಯ್ಯನವರು ಶ್ರೀ ಎ ಯನ್ ಮೂರ್ತಿರಾಯರು, ಶ್ರೀ. ಚುಳಕಿ ಗೋವಿಂದರಾಯರು ಇವನ ಕತೆಗಳನ್ನು ಕನ್ನಡದಲ್ಲಿ ಅನುವಾದಿಸಿದರು ಲಲಿತ ಗ್ರಂಥಮಾಲೆಯ ಸಂಪಾದಕರಾದ ಶ್ರೀ ಚುಳಕಿ ಗೋವಿಂದರಾಯರ "ಗಾಯ್ ಡಿ ಮಪಾಸಾನ ಕತೆಗಳು" ಎಂಬ ಸಂಕಲನ ೧೯೩೪ರಲ್ಲಿ ಪ್ರಕಟವಾಗಿ, ಮತ್ತೆ ೧೯೪೨ರಲ್ಲಿ ಎರಡನೆಯ ಮುದ್ರಣವನ್ನು ಕಂಡಿತು. ಇವರು ಮೋಪಾಸಾನ ಜೀವನ ಚರಿತ್ರೆಯ ಬಗ್ಗೆ ಕೆಲವು ವಿಷಯಗಳನ್ನು ಬರೆದಿರುವರು ೧೯೪೫ರಿಂದ ಈ ಜಗದ್ವಿಖ್ಯಾತ ಕತೆಗಾರನ ಕೃತಿಗಳನ್ನು ಒಂದೊಂದಾಗಿ ಕನ್ನಡ ಜನಕ್ಕೆ ನೀಡುವ ಆಶೆಯಿಂದ ನಾನು ಈ ಕಾರ್ಯವನ್ನಾರಂಭಿಸಿದೆ ವಿವಿಧ ದೇಶ, ಭಾಷೆಯ ನೂರಾರು ಕತೆಗಳನ್ನು ಅನುವಾದಿಸಿರುವೆನು ಮೋಪಾಸಾನ ಸಾಹಿತ್ಯ ಕೃತಿಗಳೆಲ್ಲವನ್ನೂ ಕನ್ನಡಕ್ಕೆ ತರುವ ಹಿರಿಯ ಆಶೆ ನನ್ನದಾಗಿದೆ ಈಗಾಗಲೇ ಇಪ್ಪತ್ತೈದು ಕತೆಗಳನ್ನು ಅನುವಾದಿಸಿ ಕೆಲವನ್ನಿಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿರುವೆನು ಮೋಪಾಸಾನಿಂದಲೇ ಆರಂಭವಾದ ನನ್ನ ಮೊದಲನೆಯ ಅನುವಾದ ಸಾಹಿತ್ಯ ಹಿರಿಯದಾಗಿ ಬೆಳೆಯುವುದೆಂದು ನಂಬಿದ್ದೇನೆ. ಆದುದರಿಂದಲೇ ಅವನ ಕತಾಸಂಕಲನವೇ ಆನಂದ ಗ್ರಂಥ ಮಾಲೆಯ ಮೊದಲನೆಯ 'ಅರ್ಪಣ' ರೂಪದಿಂದ ಹೆಚ್ಚು ಉತ್ಸಾಹದಿಂದ ಜನರೆದುರು ಬಂದು ನಿಲ್ಲುತ್ತಿದೆ. ಶ್ರೀಯುತರಾದ ಗೋಪಾಲಕೃಷ್ಣ ಅಡಿಗ, ಶ್ರೀಮತಿ ಕಾಮತ್, ಮತ್ತು ಇತರ ಲೇಖಕರು ಇವನ ಸಾಹಿತ್ಯವನ್ನು ಅನುವಾದಿಸುತ್ತಿರುವರು: ಉತ್ತಮ ಅನುವಾದ ಸಾಹಿತ್ಯ ನಮ್ಮ ಭಾಷೆಗೆ ಎಷ್ಟು ಬಂದರೂ ಸರಿಯೆ; ಅದಕ್ಕೆ ಪೂರ್ಣ ಸ್ವಾಗತವಿದೆ ಕಾರಣ ಅನುವಾದ ಪ್ರವಾಹ ಇಲ್ಲಿಗೆ ನಿಲ್ಲದೆ ಭರದಿಂದ ಮುಂದರಿಯಲೆಂದು ನನ್ನ ಮನೀಷೆ.

(೨)

ಮೋಪಾಸಾನ ಜೀವಿತದ ಬಗ್ಗೆ ಹೆಚ್ಚು ವಿವರಗಳನ್ನು ನಾನಿಲ್ಲಿ ಕೊಡ ಬಯಸುವುದಿಲ್ಲ. ಆವನೊಬ್ಬ ಉತ್ತಮ ಕಲಾವಿದ. ಬದುಕಿ ಬಾಳಿದ್ದು ನಾಲ್ವತ್ತುಮೂರು ವರುಷ. ತನ್ನೆಲ್ಲ ಸಾಹಿತ್ಯವನ್ನು ರಚಿಸಿದ್ದು ಕೇವಲ ಹತ್ತು ವರುಷದಲ್ಲಿ. ಭರದಿಂದ ಸಾಗಿದ ಈ ಬರವಣಿಗೆಗೆ ಹೆಚ್ಚಿನ ವೇಗದಿಂದ ಹಣವೂ, ಪ್ರತಿಫಲವೂ ಹೇರಳವಾಗಿ ಲಭಿಸಿತು. ಮಿಂಚಿನಂತೆ ತೋರಿ ಬಂದು ಮಾಯವಾದ ಮಹಾ ವ್ಯಕ್ತಿ ಇವನು.

ಕವಿಯಾಗಿ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟ ಇವನು, ತನ್ನ ಸುತ್ತಲಿನ ಜೀವನವನ್ನು ಚಿತ್ರಿಸುವ ಕತೆಗಳನ್ನು ಬರೆಯಬೇಕೆಂಬ ಕುತೂಹಲದಿಂದ ಮುಂದರಿದ. ಇತರರ ಬೆಂಬಲವಿಲ್ಲದೆ, ತಾಯಿಯನ್ನು ಪೋಷಿಸುವ ಉದ್ದೇಶದಿಂದ ಕೆಲ ಕಾಲ ನೌಕೆಯಲ್ಲಿ ಕೆಲಸ ಮಾಡಿದ. ಯುದ್ಧ ಸಮಯ ದಲ್ಲಿ ಸೈನ್ಯದಲ್ಲಿಯೂ ಕೆಲಸಕ್ಕೆ ನಿಂತ. ಆದರೆ ಸಮಾಧಾನವಿಲ್ಲದೆ ಸಾಹಿತ್ಯ ಪ್ರೇಮಿಗಳ ನೆರವಿನಿಂದ ವಿದ್ಯಾಖಾತೆಯಲ್ಲಿ ಸೇರಿದ. ಬಿಡುವು ದೊರೆತಾಗ ಬರೆಯುವ ಕೆಲಸವನ್ನು ಮುಂದರಿಸಿದ. ಪ್ರತಿ ಭಾನುವಾರ ಸಾಹಿತ್ಯ ಗುರುವಾದ ಫ್ಲಾಬೇರ್‌ನ ಮನೆಯಲ್ಲಿ ಅನೇಕ ಸಮಕಾಲೀನ ಸಾಹಿತಿಗಳ ಪರಿಚಯ ಮಾಡಿಕೊಂಡ ತಾನು ಬರೆದಿದ್ದ ಕೃತಿಗಳನ್ನು ಅವರ ಮುಂದಿಟ್ಟು ಸೂಕ್ತ ಸಲಹೆಗಳನ್ನು ಪಡೆದ 'ಝೂಲಾ,' 'ಐವಾನ್ ಟರ್ಗನೋವ್,' 'ಟಾಲ್ಸಟಾಯ್' ಮುಂತಾದವರ ಪ್ರೋತ್ಸಾಹವೂ ಇವನಿಗೆ ದೊರೆಯಿತು. ಸಾಹಿತ್ಯ ಕ್ಷೇತ್ರದಲ್ಲಿ ಇವನ ಹೆಸರು ಬಳಕೆಯಾದಂತೆಲ್ಲ ಇವನ ಕೃತಿಗಳನ್ನು ಪತ್ರಿಕಾಕರ್ತರೂ, ಪ್ರಕಟನಾಲಯದವರೂ ಬೇಡಹತ್ತಿದರು ಇವನ ಆರ್ಥಿಕ ಸ್ಥಿತಿ ಸುಧಾರಿಸಿದಂತೆಲ್ಲ ಸರಕಾರ ಉದ್ಯೋಗವನ್ನು ತೊರೆದು ಸ್ವತಂತ್ರವಾಗಿ ನಿಲ್ಲಬೇಕೆಂಬ ಹಂಬಲ ಹೆಚ್ಚಿತು ಪ್ರತಿಯೊಂದು ಹೆಜ್ಜೆ ಯನ್ನಿಡುವಾಗಲೂ ಮಾರ್ಗದರ್ಶಕನೂ, ಸಾಹಿತ್ಯ ಗುರುವೂ ಆದ ಫ್ಲಾಬೇ ರನ ಸಲಹೆಯನ್ನು ಇವನು ಪಡೆಯುತ್ತಿದ್ದ. ಇವನ ಅಪ್ಪಣೆ ಪಡೆಯದೆ, ಸೂಕ್ತ ಸಲಹೆ ಇಲ್ಲದೆ ಯಾವ ಕೃತಿಯನ್ನೂ ಪ್ರಕಟನೆಗೆ ಕಳುಹುತ್ತಿರಲಿಲ್ಲ.

ದುರ್ದೈವದಿಂದ ೧೮೮೦ರಲ್ಲಿ ಫ್ಲಾಬೇರನು ಮರಣ ಪಟ್ಟದ್ದರಿಂದ ಮೋಪಾಸಾನು ಸಾಹಿತ್ಯ ಪ್ರಪಂಚದಲ್ಲಿ ಒಬ್ಬಂಟಿಗನಾಗಿ ನಿಲ್ಲಬೇಕಾಯಿತು.

ಅಂದಿನಿಂದ ಹತ್ತು ವರುಷಗಳಲ್ಲಿ ಇವನು ಹತ್ತಾರು ಕಾದಂಬರಿಗಳನ್ನೂ ಮುನ್ನೂರು ಕತೆಗಳನ್ನೂ ಅನೇಕ ಸಾಹಿತ್ಯ ಲೇಖನಗಳನ್ನೂ, ಒಂದೆರಡು ದೀರ್ಘ ಪ್ರವಾಸ ಬರೆಹಗಳನ್ನೂ, ಬರೆದಿದ್ದಾನೆ ಇವುಗಳೆಲ್ಲವೂ ಪ್ರಕಟವಾಗಿ ಇವನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿದುದು ಸಂತೋಷದ ವಿಷಯ ಮೋಪಸಾನ ಕಾಗದ ಪತ್ರಗಳು ಬಹು ಅಮೂಲ್ಯ ಸಾಹಿತ್ಯವೆಂದು ನನ್ನ ಭಾವನೆ. ಅವನ ತಾಯಿ ಎಲ್ಲ ಕಾಗದಗಳನ್ನೂ ಸುಟ್ಟು ಬಿಟ್ಟಳಂತೆ ಆದರೆ ಇದೀಗ ಹೊರಬಿದ್ದ ಒಂದು ಪುಸ್ತಕದಲ್ಲಿ ಪ್ರಕಟಿಸಿರುವ ಸುಮಾರು ಎಪ್ಪತ್ತೈದು ಕಾಗದಗಳ ಪರಿಚಯ ನನಗಾಗಿದೆ ಈ ಪತ್ರವ್ಯವಹಾರದ ಸಾಹಿತ್ಯವನ್ನು ‘ ಮೋಪಸಾನ ಕಾಗದಗಳು ’ ಎಂದು ಸಂಕಲನ ರೂಪದಲ್ಲಿ ಮುಂದ ಒದಗಿಸುವ ಇಚ್ಛೆಯೂ ಇದೆ

ಮೇಲೆ ಸೂಚಿಸಿದ ಈ ಸಾಹಿತ್ಯ ಗುರುವಿನ ಸಾವು ಇವನ ಮನಸ್ಸಿನ ಮೇಲೆ ಪರಿಣಾಮವಾಗಿ ಇವನ ಜೀವನ ಕ್ರಮವನ್ನೇ ಬದಲಾಯಿಸಿತು ಈ ನೋವು ಒಂದು ವಿಚಿತ್ರವಾದ ಬೇನೆಯ ಪರಂಪರೆಯನ್ನೇ ಇವನಲ್ಲಿ ಮನೆ ಮಾಡಿಕೊಳ್ಳುವಂತೆ ಮಾಡಿತು ಭರದಿಂದ ಸಾಹಿತ್ಯ ಕೃತಿಗಳು ಹೊರ ಬಂದಂತೆಲ್ಲ, ಅವನ ಬೇನೆಯ ಪರಂಪರೆಯೂ ಬೆಳೆಯ ತೊಡಗಿತು ದೇಹದಲ್ಲಿ ಶಕ್ತಿ ಕುಗ್ಗಿತು ಸಣ್ಣ ವಯಸ್ಸಿನಿಂದಲೂ ಆಟ, ಪಾಟ, ವಿವಿಧ ಶಾರೀರಕ ವ್ಯಾಯಾಮಗಳಲ್ಲಿ ಆಸಕ್ತನಾಗಿದ್ದುದರಿಂದ ಬೆಳೆದು ನಿಂತ ಇವನ ಧೃಡಕಾಯ, ಭವ್ಯಾಕೃತಿ, ಸುಂದರವಾದ ಮೈಕಟ್ಟು, ಚೆಲುವಾದ ಅಡ್ಡಗಲದ ಮುಖ, ಇವುಗಳ ಬಡಗು ಕಡಮೆಯಾಯಿತು ಗುಡ್ಡದಂತೆ ಬೆಳೆಯುತ್ತಲಿದ್ದ ಸಾಹಿತ್ಯ ಬರೆವಣಿಗೆಯಿಂದ ಇವನ ದೇಹಾಲಸ್ಯವೂ ಹೆಚ್ಚಿತು ನರಗಳ ದುರ್ಬಲತೆಯಿಂದಲೂ, ಕಾರ್ಯಭಾರದಿಂದಲೂ ಇವನೊಂದೊಂದು ಸಲ ಹುಚ್ಚನಂತೆ ರೇಗುತ್ತಿದ್ದನಂತೆ. ಅನೇಕ ಸಲ ತೀವ್ರವಾದ ತಲೆ ನೋವು ಬರುತ್ತಿತ್ತಂತೆ ಈ ತಲೆನೋವಿನಿಂದ ಆಗುವ ಸಂಕಟ ಪರಿಹಾರಕ್ಕಾಗಿ ಆಗಾಗ ‘ ಈಥರ್ ’ ( ಆಕಾಶ ದ್ರವ್ಯ ) ಎಂಬ ದ್ರವ್ಯವನ್ನು ಸೇವಿಸಿ ಸಮಾಧಾನ ಹೊಂದುತ್ತಿದ್ದ ಇದರ ಪರಿಣಾಮದಿಂದ ಇವನು ಹುಚ್ಚರ ಮನಸ್ಸನ್ನು ಚಿತ್ರಿಸುವ ಅನೇಕ ಕತೆಗಳನ್ನು ಬರೆದನಂತೆ

ಮೊದಲಿನಿಂದಲೂ ಅನೇಕ ಕಷ್ಟ ಪರಂಪರೆಗಳಿಂದ ದುಃಖವನನು

ಭವಿಸಿದ ಇವನಿಗೆ ಜೀವನದಲ್ಲಿ ಯಾವ ಬಗೆಯ ಸಂತುಷ್ಟಿ ಇರಲಿಲ್ಲ; ಹುಮ್ಮಸ ವಿಲ್ಲದ ಈ ಬಗೆಯ ಜೀವನದ ಬಗ್ಗೆ ಇವನಿಗೆ ಹೆಚ್ಚು ತಾತ್ಸಾರಭಾವನೆ ಯುಂಟಾಯಿತು ಈ ಉದಾಸೀನತೆಯ ಬಗ್ಗೆ ಇವನ ಅನೇಕ ಮಿತ್ರರು ಆಶ್ಚರ್ಯಗೊಂಡಿರುವುದು ನಿಜದ ಮಾತಾಗಿದೆ. ಪ್ರತಿಯೊಂದು ವಿಷಯ ದಲ್ಲಿಯೂ ಇವನಿಗೆ ಬೇಸರವೆ; ಇವನ ಜೀವನದಲ್ಲಿ ಅಸಂತೃಪ್ತಿ ತಾಂಡವ ವಾಡುತ್ತಿತ್ತು ೧೮೮೮ರಲ್ಲಿ ಇವನಿಗೆ ಜೀವನವು ಎಷ್ಟು ಬೇಸರವಾಗಿತ್ತೆಂಬು ವುದಕ್ಕೆ ಮೇರಿಯೆಂಬ ಸ್ನೇಹಿತಳಿಗೆ ಬರೆದ ಪತ್ರದ ಅಭಿಪ್ರಾಯ ಹೀಗಿದೆ:—

"ನನಗೆ ಎಲ್ಲವೂ ಬೇಸರವೆನಿಸುತ್ತಿದೆ; ನನ್ನ ಜೀವನವು ದುರ್ಭರವೆಂದು ನನಗೆನಿಸುತ್ತದೆ. ದಿನದಲ್ಲಿ ನಾಲ್ಕಾರು ತಾಸುಗಳಲ್ಲಿ ಮಾತ್ರ ನನಗೆ ಶಾಂತಿ ದೊರೆಯುತ್ತದೆ ಈ ವಿರಾಮ ಸಮಯದಲ್ಲಿ ವಿಪುಲವಾದ ಹಣವನ್ನು ತರುವ ಸಾಹಿತ್ಯವನ್ನು ಬರೆಯುತ್ತೇನೆ. ಬರೆಯುವುದು ಕಲೆಯ ಆರಾಧನೆ ಗೆಂದಲ್ಲ, ನನ್ನ ಸುತ್ತಲೂ ಆವರಿಸಿಕೊಂಡಿರುವ ಈ ವಿಷಮಯ ಜಗತ್ತಿನ ವಿಚಿತ್ರ ಘಟನೆಗಳನ್ನು, ರಾಜಕೀಯ ರಂಗದಲ್ಲಿಯ ಕುತಂತ್ರಗಳನ್ನು, ಸಮಾ ಜದಲ್ಲಿಯ ಕುಂದುಕೊರತೆಗಳನ್ನು, ನಾಯಕರ ಲೋಪದೋಷಗಳನ್ನು, ಮುಂತಾದವುಗಳ ಚಿತ್ರವನ್ನು ಜನರ ಮುಂದಿಡುವುದೇ ನನ್ನ ಕೆಲಸ. ಸತ್ಯ ಜೀವನವನ್ನು, ಜೀವನದ ನಿಜಸ್ಥಿತಿಯನ್ನು, ಇದ್ದದ್ದು ಇದ್ದ ಹಾಗೆ ಚಿತ್ರಿಸ ಬೇಕೆಂಬುದೇ ನನ್ನ ಹಂಬಲ. ಶಾಂತಚಿತ್ತದಿಂದ, ಸಮಾಧಾನದಿಂದ ಜೀವಿಸುವ ಸ್ಥಿತಿ ನನಗೆ ಈ ಜನ್ಮದಲ್ಲಿ ದೊರೆಯಲಾರದು. ನಾನು ಹತಭಾಗ್ಯ ಆದರೆ ದೇವರು ದಿನದಲ್ಲಿ ಈ ಕೊಂಚ ಅವಧಿಯನ್ನು ಕಲ್ಪಿಸಿ ಕೊಟ್ಟು, ಇಷ್ಟಾದರೂ ಬರೆಯಲು ಅನುವು ಮಾಡಿಕೊಟ್ಟದುದಕ್ಕೆ ಆತನಿಗೆ ನನ್ನ ಅನಂತ ಪ್ರಣಾಮಗಳು ಜನರಿಗಿದು ರುಚಿಸಿದರೆ, ಇದರಿಂದ ಅವರು ಸಂತೃಪ್ತ ರಾದರೆ ನನಗೆ ಪರಮ ಸಂತೋಷ. ಸತ್ಯೋಪಾಸಕರಾದ ನಾವು ಬಹಳ ಕಾಲ ಬಾಳಲಾರೆವು. ಬದುಕಿನ ಒಲೆಯಲ್ಲಿ ಸಿಕ್ಕು ಬೆಂದು ಹೋಗುವೆವು. ನಮ್ಮ ಜೀವನದ ಅವಧಿ ಹೆಚ್ಚಾಗಲಾರದು; ಅಲ್ಪ ವಯಸ್ಕರಾಗಿ ಮಡಿಯು ವೆವು." ಈ ಮಾತುಗಳ ಸತ್ಯವನ್ನು ಇವನ ಎಲ್ಲ ಕತೆಗಳಲ್ಲಿಯೂ ನಾವು ಕಾಣಬಹುದು

೧೮೯೧ರ ಕೊನೆಗೆ ಇವನಿಗೆ ಹುಚ್ಚು ಹಿಡಿಯಿತು. ಈ ಉನ್ಮಾದಾ

ವಸ್ಥೆಯಲ್ಲಿ, ಡಾಕ್ಟರನ ಚಿಕಿತ್ಸಾಲಯದಲ್ಲಿಯೇ ಆತ್ಮಹತ್ಯ ಮಾಡಿಕೊಂಡ ನಂತೆ ಅರ್ಧಾಂಗವಾಯುವಿನಿಂದ ಮಡಿದನೆಂದು ಕೆಲವರ ಅಭಿಪ್ರಾಯ. ಆದರೆ ೧೯೪೩ರ ಜೂಲೈ ಆರನೇ ದಿನಾಂಕ ಇವನು ಮಡಿದನು; ದಿವ್ಯ ಜ್ಯೋತಿ ಮಾಯವಾಯಿತು! ಈ ದುರಂತ ಚಿತ್ರದ ಹೆಚ್ಚಿನ ವಿವರಗಳನ್ನು ಇಲ್ಲಿ ನಾನು ಕಾಣಿಸುವುದಿಲ್ಲ ಮುಂದೆ ಇವನ ಬಗ್ಗೆ ವಿವರವಾದ ಪ್ರತ್ಯೇಕ ಗ್ರಂಥವನ್ನೇ ಓದುಗರಿಗೆ ಒದಗಿಸಬೇಕೆಂಬ ಹಂಬಲವಿದೆ; ಓದುಗರ ಇಚ್ಛೆ ಆಗ ಸಫಲವಾಗಬಹುದು

(೩)

ಈ ಸಂಗ್ರಹದಲ್ಲಿ ಬಂದಿಸುವ ಕತೆಗಳನ್ನು ವಿಷಯ ವೈವಿಧ್ಯತೆಯಿಂದ ಆರಿಸಲಾಗಿದೆ. ಈಗಾಗಲೇ ಪುಸ್ತಕರೂಪದಲ್ಲಿ ಬಂದ ಕತೆಗಳನ್ನು, ಇತರ ಪತ್ರಿಕೆಗಳಲ್ಲಿ ಪ್ರಕಟವಾದ ಇನ್ನಿತರ ಕತೆಗಳನ್ನುಳಿದು, ಬೇರೆಯವುಗಳನ್ನೇ ಈ ಸಂಕಲನದಲ್ಲಿ ಸೇರಿಸಲಾಗಿದೆ ಇಲ್ಲಿಯ ಕೆಲವು ಕತೆಗಳು, ಕಥಾವಳಿ, ಉಷಾ, ಜಯಕರ್ನಾಟಕ, ಕರ್ನಾಟಕ ಬಂಧು, ಜಯ ಹಿಂದ್, ಆದರ್ಶ, ಸುಭೋಧ,ಗಳಲ್ಲಿ ಪ್ರಕಟವಾಗಿವೆ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದುದಕ್ಕೆ ಈ ಪತ್ರಿಕಾಕರ್ತರಿಗೆ ನಾನು ಆಭಾರಿಯಾಗಿದ್ದೇನೆ

'ಸೀತಾಪತಿ' ಎಂಬ ಕಾವ್ಯನಾಮದಿಂದ ಅನೇಕ ಕತೆಗಳನ್ನು ಬರೆದಿದ್ದೇನೆ ಎಂಬ ವಿಷಯವನ್ನು ಓದುಗರಿಗೆ ತಿಳಿಸುವುದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ

ಇದು "ಆನಂದ ಗ್ರಂಥಮಾಲೆ"ಯ ಮೊದಲ ಕಾಣಿಕೆಯಾದುದರಿಂದ ಸಂಚಾಲಕರ ಇಚ್ಛೆಯಂತೆ ಈ ಸಂಕಲನಕ್ಕೆ "ಅರ್ಪಣ"ವೆಂದು ಹೆಸರಿಡಲಾಗಿದೆ

ಸಾಹಿತ್ಯ ಕ್ಷೇತ್ರದಲ್ಲಿ ಉನ್ನತ ಸ್ಥಾನವನ್ನು ಗಳಿಸಿರುವ ನನ್ನ ಪರಮ ಮಿತ್ರರಾದ ಶ್ರೀ ಅ. ನ ಕೃಷ್ಣರಾಯರು ವಾತ್ಸಲ್ಯದಿಂದ ಬರೆದು ಕೊಟ್ಟ ಮುನ್ನುಡಿಗಾಗಿ ಅವರಿಗೆ ನನ್ನ ಅನಂತ ನಮಸ್ಕಾರಗಳು. ಅವರ ಅನೇಕ ಬಗೆಯ ನೆರವನ್ನು ನಾನು ಮರಯಲಾರೆ

ನಾನು ಕನ್ನಡ ಸಾಹಿತ್ಯದಲ್ಲಿ ಕಾಲಿಡಲು ಕಾರಣರಾದ ಪೂಜ್ಯ ಪ್ರೊ.ದ ರಾ.ಬೇಂದ್ರೆಯವರನ್ನು, ನನ್ನ ಮೊದಲನೆಯ ಕತೆಯನ್ನು ತಮ್ಮ ಮಾಸಪತ್ರಿಕೆ

ಯಲ್ಲಿ ಪ್ರಕಟಿಸಿದ ಪ್ರೊ|| ಶಿ. ಶಿ. ಬಸವನಾಳರನ್ನೂ, ನನ್ನ ಮೊದಲನೆಯ ಕಾದಂಬರಿಯನ್ನು ತಮ್ಮ ಸಂಜೀವನಿ ಗ್ರಂಥಮಾಲೆಯಲ್ಲಿ ಪ್ರಕಟಿಸಿದ ಶ್ರೀ ಕಲಮುದಾನಿ ಗುರುರಾಯರನ್ನೂ ಇತರ ಮಿತ್ರರನ್ನೂ ಇಲ್ಲಿ ನೆನೆಯುವುದು ನನ್ನ ಕರ್ತವ್ಯ.

ಇತರ ಭಾಷಾ ಸಾಹಿತ್ಯವನ್ನು ಕನ್ನಡ ಜನಕ್ಕೆ ನೀಡುವ ನನ್ನ ಸಾಹಸಕ್ಕೆ, ಈ ವರೆಗೆ ಬೆಂಬಲವನ್ನಿತ್ತು, ಪ್ರೋತ್ಸಾಹಿಸಿ, ಮುಂದೆಯೂ ಪ್ರೋತ್ಸಾಹಿಸಲಿರುವ ಕನ್ನಡ ಕುಲಕ್ಕೆ ನನ್ನ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ

ಹುಬ್ಬಳ್ಳಿ
೧—೧—೧೯೫೦

ಪಿ. ವೆಂಕೋಬಾಚಾರ್ಯ

## ಮುಂಬರುವ ಪುಸ್ತಕಗಳು

೧ ತೆಲುಗಿನ ಕತೆಗಳು
೨. ತಮಿಳು ಕತೆಗಳು
೩. ಸಂಗಾತಿ (ಸ್ವತಂತ್ರ ಕಾದಂಬರಿ)

## ಪಿ. ವೆಂಕೋಬಾಚಾರ್ಯರ ಇತರ ಪುಸ್ತಕಗಳು

೧. ವಿಧಿತಂದವಧು ಸಾಮಾಜಿಕ ಕಾದಂಬರಿ (೨ನೆಯ ಆವೃತ್ತಿ ಅಚ್ಚಿನಲ್ಲಿದೆ)
೨. ಕುಲವಿಲ್ಲದ ಹೆಣ್ಣು ,,
೩ ವೃಂದ ,,

# ಸಂಪಾದಕರ ಮಾತು



ಆನಂದ ಗ್ರಂಥಮಾಲೆಯು ಭಾರತದ ಹೊಸ ಯುಗದ ಆರಂಭದಲ್ಲಿ ಜನ್ಮತಾಳುತ್ತಿದೆ ಕನ್ನಡ ಸಾಹಿತ್ಯ ಸೇವೆಗೆಂದು ಅನೇಕ ಸಂಘ ಸಂಸ್ಥೆಗಳು ಕೆಲಸ ಮಾಡುತ್ತಿರುವ ಕಾಲದಲ್ಲಿ ಹೊಸ ಸಂಘ ಸಂಸ್ಥೆಗಳ ಉದಯವು ಎಷ್ಟು ಹೆಚ್ಚಿದರೂ ಕಡಿಮೆಯೆಂದೇ ಈ ಕಾರ್ಯವನ್ನು ಕೈಕೊಳ್ಳಲಾಗಿದೆ

ಅನುವಾದ ಸಾಹಿತ್ಯವನ್ನು ಕನ್ನಡ ಲೋಕಕ್ಕೆ ಒದಗಿಸುವ ಗುರಿ ನಮ್ಮದಾಗಿದೆ. ವಿವಿಧ ಭಾಷೆಗಳ ಸಾಹಿತ್ಯವು ಕನ್ನಡದಲ್ಲಿ ಈಗಾಗಲೇ ಬಂದಿರಲಿಕ್ಕೆ ಸಾಕು. ಬಂಗಾಲೀ ಸಾಹಿತ್ಯವು ಎಲ್ಲೆಲ್ಲಿಯೂ ಕಾಣುತ್ತಿದೆ. ತೆಲುಗು, ಮರಾಠಿ ಸಾಹಿತ್ಯದ ಅನುವಾದಗಳು ಅಲ್ಲಲ್ಲಿ ಇಣಿಕಿ ನೋಡುತ್ತಿವೆ ತಮಿಳು ಕತೆಗಳು ಅಲ್ಲೊಂದು ಇಲ್ಲೊಂದು ಬರುತ್ತಿವೆ ಆದರೆ ಈ ದಿಶೆಯಲ್ಲಿ ಆಗಬೇಕಾದಷ್ಟು ಕಾರ್ಯ ಭರದಿಂದ ಸಾಗಿಲ್ಲವೆಂಬ ಮಾತು ನಿಜವೆಂದು ನಮ್ಮ ಮತ ಭಾವನೆಯೆಂದರೂ ತಪ್ಪಲ್ಲ ಕಾರಣ ನಮ್ಮ ಮಾಲೆಯಲ್ಲಿ ಅನುವಾದ ಸಾಹಿತ್ಯಕ್ಕೆ ಯಾವಾಗಲೂ ಸ್ವಾಗತವಿದೆ ಹೀಗೆಂದಲ್ಲಿ ಸ್ವತಂತ್ರ ಸಾಹಿತ್ಯವನ್ನು ಕೊಡುವುದೇ ಇಲ್ಲವೆಂದು ಓದುಗರು ನಿರಾಶೆಪಡಬೇಕಾಗಿಲ್ಲ ವರುಷದಲ್ಲಿ ಒಂದು ಸ್ವತಂತ್ರ ಕೃತಿಯನ್ನಾದರೂ ಒದಗಿಸಲೇಬೇಕೆಂಬ ನಿರ್ಧಾರ ನಮ್ಮದೆಂದು ಸೂಚಿಸಬಯಸುತ್ತೇವೆ

ಮಾನವ ಲೋಕಕ್ಕೆ ಆನಂದ, ಹಿಗ್ಗು, ಉತ್ಸಾಹ ಅತ್ಯಗತ್ಯ ಈ ಮಾಲೆಯು ಸರ್ವರಿಗೂ ಸುಖ, ಆನಂದಗಳನ್ನೊದಗಿಸುವುದಕ್ಕೆ ಬದ್ಧಕಂಕಣವಾಗಿದೆ. ಪುಸ್ತಕಗಳನ್ನು ಅಂದವಾಗಿ ಸಕಾಲಕ್ಕೆ ಹೊರಡಿಸುವುದೇ ನಮ್ಮ ಬಯಕೆಯಾಗಿದೆ ಇದನ್ನು ಪೂರೈಸಲು ನಮ್ಮ ಮಾಲೆಗೆ ಸಲಹೆಗಾರರಾಗಿ ಸಹಕರಿಸಲು ಆಶ್ವಾಸನವಿತ್ತ ಶ್ರೀಗಳಾದ ಎಸ್. ಆರ್. ಮಳಗಿ, ಎಂ. ಎ. ಬಿ. ಟಿ, ಎಸ್. ಕೆ. ಕುಲಕರ್ಣಿ, ಎಂ ಎ. ಬಿ. ಟಿ, ಆರ್. ವಿ. ಕುಲಕರ್ಣಿ ಎಂ ಎ, ಮತ್ತು ದೇಸಾಯಿ ದತ್ತಮೂರ್ತಿ, ಇವರುಗಳ ನೆರವಿನಿಂದ ನಮ್ಮ ಕೆಲಸವು ಮುಂದೆಯೂ ಹಗುರಾಗಿ ನಡೆಯುವುದೆಂದು ನಂಬಿದ್ದೇವೆ.

ಪ್ರಸಿದ್ಧ ಸಾಹಿತಿಗಳಾದ ಶ್ರೀ. ಅ ನ. ಕೃಷ್ಣರಾಯರ ಉದಾರ ಮುನ್ನುಡಿ ಸಕಾಲಕ್ಕೆ ಬಂದೊದಗಿತು; ಅವರಿಗೆ ನಮ್ಮ ಅಭಿವಂದನೆಗಳು ಮೋಪಸಾನ್ನ ಜೀವನದ ಬಗ್ಗೆ ಹೆಚ್ಚು ವಿವರಗಳನ್ನು ಜನರ ಮುಂದಿಡಬೇಕೆಂಬ ಬಯಕೆ ನಮ್ಮದಾಗಿದೆ. ಮುಂದೆ ಮತ್ತೊಂದು ಮೋಪಸಾನ ಕಥಾ ಸಂಕಲನವು ಹೊರಡಿಸಿದಾಗ ಈ ಕೊರತೆ ಪೂರ್ಣ ಮಾಡುವೆವೆಂಬ ಭರವಸೆ ಕೊಡುತ್ತೇವೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಸಾಧನ ಮುದ್ರಣಾಲಯದ ಒಡೆಯರೂ ಆಪ್ತಮಿತ್ರರೂ ಆದ ಶ್ರೀ ಶೇಷಗಿರಿರಾಯರ, ಕರಡುಗಳನ್ನು ತಿದ್ದಲು ಸಹಕರಿಸಿದ ಗೆಳೆಯರಾದ ಶ್ರೀ ಎಂ. ಎಸ್ ಶೆಟ್ಟಿಯವರ ಉಪಕಾರ ವನ್ನೆಷ್ಟು ಸ್ಮರಿಸಿದರೂ ಕಡಮೆಯೇ

ಅಂದವಾದ ಮುಖಚಿತ್ರವನ್ನು ಬರೆದು ಕೊಟ್ಟ ತರುಣ ಮಿತ್ರ ಶ್ರೀನಿವಾಸ ಸಿಗ್ಗಾಂವ ಇವರ ಉಪಕಾರ ಮರೆಯಲಾರೆವು

ಈ ಸಂಕಲನದಲ್ಲಿ ಹದಿನೇಳು ಕತೆಗಳ ಬದಲಾಗಿ ಹದಿನಾರು ಕತೆಗಳನ್ನಷ್ಟೇ ಪ್ರಕಟಿಸಿದೆ ಎಂಬ ವಿಷಯವನ್ನು ಓದುಗರು ಗಮನಿಸಬೇಕಾಗಿ ವಿನಂತಿ.

ನಮ್ಮ ಮಾಲೆ ಕನ್ನಡ ನಾಡ ನುಡಿ ಸೇವೆ ಮಾಡಲು ಸಮರ್ಥವಾಗುವಂತೆ ಕನ್ನಡಿಗರೆಲ್ಲರೂ ಉದಾರ ಹೃದಯದಿಂದ ನೆರವು ನೀಡಿ. ಸಹಕರಿಸಬೇಕಾಗಿ ಕೋರುತ್ತೇವೆ.

ಹುಬ್ಬಳ್ಳಿ
೧—೧—೧೯೫೦

**ಸಂಪಾದಕ**
ಆನಂದ ಗ್ರಂಥಮಾಲಾ

# ಅರ್ಪಣ

ನನ್ನನ್ನು ಹೆತ್ತು,
ಸಾಕಿ, ಸಲಹಿ ಬಾಳಿನಲ್ಲಿ
ಬೆಳಕನ್ನು ಬೀರಿದ
ತಾಯಿ
**ಭಾರತಮ್ಮನವರಿಗೆ**

# ಪರಿವಿಡಿ

# ಗುಣ

ಶುಕ್ರವಾರ ಹಗಲು ಹನ್ನೊಂದರ ಸಮಯ. **ದೇವಾಲ**ಯದ ಅಂಗಳದಲ್ಲಿ, ಬೀದಿಗೆ ಹೊಂದಿಕೊಂಡು ನಿಂತು ತನ್ನ ಅಮರವಾದ ವಾದ್ಯದ ತಂತಿಗಳನ್ನು ಮೀಟುತ್ತಿರುವನು ಪ್ರಶಾಂತವಾದ ವಾತಾವರಣದಲ್ಲಿ ಇವನ ಬರುವಿಕೆಯ ಕುರುಹು ಇದರಿಂದಲೇ ತಿಳಿಯುತ್ತಿತ್ತು ಕರುಳಿನ ತಂತಿಯನ್ನೂ ಮಿಡಿಯುವುದರಲ್ಲಿ ಪ್ರವೀಣನಾದ ಇವನ ಕುಶಲತೆ, ಮಾನವತೆಯಲ್ಲಿ ಅಡಗಿಕೊಂಡಿದ್ದ ಕರುಣೆಯನ್ನೂ ಹೊಡೆದೆಬ್ಬಿಸುವಂತಿತ್ತು, ಇವನ ತಂತೀವಾದ್ಯದ ನಿಪುಣತೆ ಅದರೊಂದಿಗೆ ಸುಸ್ವರದಿಂದ ಹೊರಬೀಳುವ ಕರುಣಾಪೂರಿತ ಕವನಗಳು ಇವನ ಹೃದಯದ ಅರಿಕೆಯನ್ನೂ ಹೊರಚೆಮ್ಮುತ್ತಿದ್ದವು

ಇದು ಪ್ರತಿಶುಕ್ರವಾರವೂ ಇವನು ತಪ್ಪದೇ ಆಚರಿಸುವ ಕಾರ್ಯಕ್ರಮವಾಗಿತ್ತು ಇವನು ಬಂದನೆಂಬುದು ತಿಳಿದಕೂಡಲೇ ಅಕ್ಕಪಕ್ಕದ ಯುವತಿಯರು, ವಿವಾಹಿತ ಸ್ತ್ರೀಯರೂ, ಚಿಕ್ಕ ಬಾಲಕರೂ ಯಾವುದೋ ಒಂದು ನೆಪಮಾಡಿಕೊಂಡು ದೇವಾಲಯದ ಕಡೆಗೆ ಬಂದು ದೇವತಾರಾಧನೆಯನ್ನೂ ಮಾನಸಿಕ ಸಂತೋಷವನ್ನೂ ಪಡೆಯುತ್ತಿದ್ದರು. ಮನೆಗೆ ಹಿಂತಿರುಗುವಾಗ ಈ ಗಾಯಕನು ಹಾಡುವುದನ್ನು ಮನದಣಿಯ ಕೇಳಿ ತಮ್ಮ ಮೆಚ್ಚುಗೆಯನ್ನು ಸೂಚಿಸಿ, ತಮ್ಮ ಶಕ್ತಿಗೆ ಅನುಗುಣವಾದ ಪಾರಿತೋಷಕವನ್ನಿತ್ತು ಮನೆಗಳಿಗೆ ತೆರಳುತ್ತಿದ್ದರು

ಮದುವೆಯಾಗದೆ ಇದ್ದ ಅನೇಕ ಸ್ತ್ರೀಯರು ಇವನನ್ನು ಮದುವೆಯಾಗುವ ನೆವದಿಂದಲೋ ಏನೋ ತಪ್ಪದೇ ಬಂದು ಅವನೆದುರು ಹೆಚ್ಚು ವೇಳೆ ನಿಂತು, ಬಗೆಬಗೆಯ ಬಹುಮಾನಗಳನ್ನೂ ಅವನಿಗೆ ಬೇಡಾಗಿದ್ದರೂ ಇತ್ತು ತೆರಳುತ್ತಿದ್ದರು. ನಕ್ಕು ನಲಿದು ಹಾಸ್ಯದ ಮಾತುಗಳಿಂದ ಅವನ ದೃಷ್ಟಿಯನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತಿದ್ದರು. ಕುಚೇಷ್ಟೆಗಳಿಂದ ಅವನನ್ನು ಒಲಿಸಿಕೊಳ್ಳಲು ಅವರು ಅನೇಕ ವಿಧದಲ್ಲಿ ಪ್ರಯತ್ನಿಸುತ್ತಿದ್ದರು.

ಆ ಗಾಯಕನು ಬಲು ಚಲುವ. ವಯಸ್ಸು ಮೂವತ್ತಿರಬಹುದು ಆದರೂ ಮನಸ್ಸಿನಲ್ಲಿಯ ವೇದನೆಯಿಂದ ನೋಡಲು ಸ್ವಲ್ಪ ಹೆಚ್ಚು ವಯಸ್ಸಾದವನಂತೆ ಕಂಡು ಬರುತ್ತಿತ್ತು ಇಂಥಾ ಸ್ಥಿತಿಯಲ್ಲಿಯೂ ಅವನು ಅನೇಕ ಹೆಂಗಳೆಯರನ್ನು ತನ್ನ ಗಾನ ಮಾಧುರ್ಯದಿಂದಲೂ, ಸೊಗಸಾದ ಚೆಲುವಿಕೆಯಿಂದಲೂ ಮೋಹಿಸುವಂತೆ ಮಾಡಿದ್ದ. ತನ್ನ ರೂಪ, ಗಾಯನ ಇತರರಿಗೆ ಪ್ರೀತಿಯಾಗಿದೆ ಎಂಬುದನ್ನು ಮಾತ್ರ ಅರಿತಿದ್ದನೇ ಹೊರತು, ಇವನನ್ನು ನೋಡುವವರ ಮನಸ್ಸಿನಲ್ಲಾಗುವ ಮನೋವಿಕಾರಗಳ ಅರಿವು ಅವನಿಗಿರಲಿಲ್ಲ ಇಂಥಾ ಭಾವನೆಗಳು ಅವರಲ್ಲಿ ಜನಿತವಾಗಿವೆಯೆಂಬ ಪರಿವೆಯೂ ಇಲ್ಲದವನಾಗಿದ್ದನು

ತನ್ನ ಸಿತಾರವನ್ನು ನುಡಿಸುವುದೂ ಪ್ರತಿ ಶುಕ್ರವಾರವೂ ಹೊಸ ಹೊಸ ಭವ ಕವಿತೆಗಳನ್ನೂ, ಐತಿಹಾಸಿಕ ಚಿತ್ರಗಳನ್ನೂ ಉಲ್ಲೇಖಿಸುವ ನೀಳ್ಗವಿತೆಗಳನ್ನು ಹಾಡುವುದೂ, ಆ ಕಲೆಯ ಆರಾಧನೆಯಲ್ಲಿ ಮಗ್ನನಾಗುವುದರ ಹೊರತು ಬಾಹ್ಯ ಪ್ರಪಂಚದಲ್ಲಿ ನಡೆಯುವ ವಿಷಯಗಳ ಕಡೆಗೆ ಅವನ ಲಕ್ಷ್ಯ ಹೆಚ್ಚಿಗೆ ಹೋಗುತ್ತಿರಲಿಲ್ಲ. ಆದುದರಿಂದ ತನ್ನನ್ನು ಆರಾಧಿಸಲು ಬಂದ ಹುಡುಗರ ಕಡೆಯಾಗಲಿ, ತಮ್ಮ ಪ್ರೀತಿಯ ನೋಟಗಳನ್ನು ಬೀರಲು ಬರುತ್ತಲಿದ್ದ ನವಯುವತಿಯರ ಲಾವಣ್ಯದ ಕಡೆಗಾಗಲಿ ಇವನ ನೋಟವಿರಲಿಲ್ಲ. ಚಿಕ್ಕ ಮಕ್ಕಳು ಹತ್ತಿರ ಬಂದಾಗ ಅವನೆದೆ ಕುಣಿಯುತ್ತಿತ್ತು, ಅವನ ಮುಖದಲ್ಲಿ ಮಂದಹಾಸ ಸೂಸುತ್ತಿತ್ತು ಅವನಾಗ ನುಡಿಸುವ ಗೀತಗಳು ಮೇಲ್ತರಗತಿಯದಾಗಿ ಇರುತ್ತಿದ್ದವು. ಇದರ ಕಾರಣ ನುಡಿಸುವವನಿಗೆ ಮಾತ್ರ ತಿಳಿದ ವಿಷಯವಾಗಿತ್ತು.

ಕಾಲವು ಯಾರಿಗೂ ನಿಲ್ಲುವದಿಲ್ಲ ತನ್ನ ಗತಿಯನ್ನೂ ಯಥಾರೀತಿಯಲ್ಲಿ ಅನುಸರಿಸುತ್ತ ಸ್ವತಂತ್ರರೀತಿಯಲ್ಲಿ ಹೋಗುವ ಲಕ್ಷಣ ಅದರದು. ಅದರ ದೃಷ್ಟಿಯಲ್ಲಿ ಎಲ್ಲರೂ ಸಮಾನರೇ ಯಾರನ್ನೂ ಅದು ಲಕ್ಷಿಸುವುದಿಲ್ಲ ಅದಕ್ಕೆ ಆದಿ ಅಂತ್ಯಗಳು ಇಲ್ಲವೆನ್ನಬಹುದು ಹೊಸತು ಹಳೆಯದೆಂಬ ಭೇದಭಾವವು ಕೆಟ್ಟ ಚಾಳಿ ಅದಕ್ಕಿಲ್ಲ. ತನ್ನದೇ ಆದ ಪ್ರತ್ಯೇಕ ರೀತಿಯಲ್ಲಿ ನಡೆಯುತ್ತಿರುವಾಗ ಜನರು ಅದನ್ನೇ ಅವಲಂಬಿಸಬೇಕೇ ಹೊರತು, ಅದು ಯಾರನ್ನೂ ಅನುಸರಿಸುವದಿಲ್ಲ. ಇದರ ಗತಿಯಲ್ಲಿ ಸಿಕ್ಕು ಕೆಲವರು ಸುಖಪಡುವುದೂ ಉಂಟು ಇನ್ನಿತರರು ದುಃಖಕ್ಕೆ ಒಳಗಾಗುವುದೂ ಉಂಟು.

ನಮ್ಮ ಗಾಯಕನು ಇವೆಲ್ಲವನ್ನೂ ಅರಿತ ಅನುಭವಶಾಲಿ. ವಯಸ್ಸು ಚಿಕ್ಕದಾದರೂ, ಅವನು ಚೆನ್ನಾಗಿ ಓದಿಕೊಂಡವ. ತನ್ನ ಅನುಭವವನ್ನು ಒಳ್ಳೇ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಿ, ಅದರ ಫಲವನ್ನುಂಡವ. ಆದರೆ ಕಷ್ಟವು ಯಾರನ್ನೂ ಬಿಡುವುದಿಲ್ಲ ಅದರ ಪರಿಚಯವುಳ್ಳ ಮಾನವನು ಜ್ಞಾನ ಸಾಧನೆಗೆ ಹತ್ತಿರದವನಾಗುವನು ದುಃಖವು ಮನುಷ್ಯನ ನಿಜಸ್ಥಿತಿಯನ್ನೂ ತೋರಿಸಿಕೊಟ್ಟು, ಒಳ್ಳೆಯ ಮಾರ್ಗವಾವುದೆಂಬುದನ್ನೂ ತಿಳಿಯಲು ಸಹಾಯಕವಾಗುವುದು.

ಇದನ್ನರಿತ ಗಾಯಕನು ತನ್ನ ಮನೆಯಲ್ಲಿ ಯಾವ ತೊಂದರೆ ಇದ್ದರೂ ಲೆಕ್ಕಿಸದೆ ಶುಕ್ರವಾರದ ಪ್ರಾರ್ಥನೆಗೆ ಬರುವ ಜನರ ದೇವಸೇವೆಗೆ ಸಹಾಯಕನಾಗಿ ತನ್ನ ಅಲ್ಪ ಸೇವೆ ಸಲ್ಲಿಸಲು ಬರುವ ವಾಡಿಕೆ ತಪ್ಪಿಸುತ್ತಿರಲಿಲ್ಲ. ಅವನು ಗಾನಲಹರಿಯಲ್ಲಿ ಮಗ್ನನಾಗಿ ಹಾಡುತ್ತಿರುವ ಅಂದಿನ ವೈಖರಿ ವಿಶಿಷ್ಟರೀತಿಯದು ಅಂದು ಅವನು ಹೊಸ ಸಂದೇಶವನ್ನು ಪ್ರಪಂಚಕ್ಕೆ ಬೀರುವಂತಿತ್ತು ಶುಕ್ರವಾರದ ಪೂಜ್ಯತೆಯನ್ನರಿತಿದ್ದ ಅವನ ಮುಖದಲ್ಲಿ ಅಂದು ವಿಶೇಷ ಕಾಂತಿಯು ಒಡೆದದ್ದು ಕಾಣುತ್ತಿತ್ತು. ಅಂದವನು ಹಾಡಿದ ಗೀತೆಗಳು ಅಮರ ಸಂದೇಶವನ್ನು ಸಾರುತ್ತಿದ್ದವು.

ಅಂದೇಕೋ ಅವನ ಮುಖ ವೈಖರಿ ಬಹಳ ಸಂತೋಷದಲ್ಲಿದ್ದಂತೆ ಕಾಣುತ್ತಿತ್ತು. ಅವನ ಮುಖದಿಂದ ದಿವ್ಯ ತೇಜಸ್ಸು ಹೊರಸೂಸುವಂತಿತ್ತು. ಇದರಿಂದ ನೆರೆದ ಜನರೆಲ್ಲರೂ ಅವನ ಗಾನ ಕಲೆಗೆ ಮೆಚ್ಚಿ ಹೆಚ್ಚಿನ ಬಹುಮಾನಗಳನ್ನು ಕೊಟ್ಟರು ಜನಸಂದಣಿ ಎಷ್ಟು ಹೊತ್ತಾದರೂ ಕಡಿಮೆಯಾಗುವಂತೆನಿಸಲಿಲ್ಲ. ನಿಯಮದಂತೆ ತನ್ನ ಹಾಡನ್ನು ಕೇಳಿ ಒಂದು ಅಮೂಲ್ಯವಾದ ಕೈ ವಸ್ತ್ರವನ್ನು ಓರ್ವ ಯುವತಿ ಬಹುಮಾನವಾಗಿ ಕೊಟ್ಟಳು ಅವನ ಕಡೆ ಪ್ರೇಮದ ನೋಟವನ್ನೂ ಬೀರಿದಳು. ಅದರಂತೆ ಅನೇಕ ಯುವತಿಯರು ಮಾಡುವುದನ್ನು ಕಂಡು ಗಾಯಕನು ಬೆರಗಾದ. ಪೂಜಾವೇಳೆಯು ಮುಗಿದು ಜನರೆಲ್ಲರೂ ಹಿಂತಿರುಗುವಾಗ ಆ ಯುವತಿಯರಿನ್ನೂ ಅಲ್ಲೇ ಕಾದಿರುವುದು ಕಂಡು ತನ್ನ ಕೃತಜ್ಞತೆಯನ್ನು ಸೂಚಿಸುತ್ತ ಮನೆಗೆ ಹೋಗಲು ಎದ್ದುನಿಂತು "ನಿಮ್ಮೆಲ್ಲರಿಗೂ ನನ್ನ ವಂದನೆಗಳು. ಆದರೆ " ಎಂದು ಹೇಳಿ ಸುಮ್ಮನಾದ.

" ನಮ್ಮಲ್ಲಿ ಯಾರನ್ನಾದರೂ ಮದುವೆಯಾಗಬಹುದೇ ? " ಎಂದು ನಿರ್ಭಯವಾಗಿ ಅವರು ಕೇಳಿದರು.

" ಆ ಕೆಲಸವು ನನ್ನಿಂದಾಗಲಾರನು. " ಎಂದು ಉತ್ತರವಿತ್ತ ಆ ಗಾಯಕ. ಹೀಗೆ ಹೇಳುವಾಗ ಅವನ ಕಣ್ಣಲ್ಲಿ ನೀರು ಬರುವುದು ಕಂಡು ಅಲ್ಲಿ ನೆರೆದ ಯುವತಿಯರು ತಮ್ಮಲ್ಲಿಯೇ ಸಮಾಧಾನ ಹೊಂದಿ, ಚೀಟಿ ಹಾಕಿದಲ್ಲಿ ಯಾರ ಹೆಸರು ಬರುವದೋ ಅವಳೇ ಅವನನ್ನು ವರಿಸಬೇಕೆಂದು ನಿರ್ಧರಿಸಿದರು

ಇವರ ನಿರ್ಧಾರ ಕೇಳಿ ಭೀತನಾದ ಗಾಯಕನು " ಅದೂ ನಡೆಯ ಬಾರದು ನಾನು ಯಾರನ್ನೂ ವರಿಸಲು ಮನಸ್ಸು ಮಾಡಿಲ್ಲ" ಎಂದು ಹೇಳಿದ.

" ಏತಕ್ಕೆ ? ಏತಕ್ಕೆ ? " ಎಂದು ಎಲ್ಲರೂ ಕೇಳಿದಾಗ ಅವನು ಯಾವ ಬಗೆಯಲ್ಲಿಯೂ ಉತ್ತರ ಕೊಡದೆಯೇ ಅವರನ್ನು ದಿಟ್ಟಿಸಿ ನೋಡುತ್ತಾ ನಿಂತುಬಿಟ್ಟ. ಅವನ ಕಣ್ಣುಗಳಿಂದ ನೀರು ಧಾರೆಯಾಗಿ ಹರಿಯತೊಡಗಿತು ಅವನು ಮೌನದಿಂದ ನಿಂತಲ್ಲಿಯೇ ನಿಂತುದನ್ನು ಕಂಡು, ನೆರೆದ ಯುವತಿ ಯರೆಲ್ಲರೂ ತಮ್ಮದೇ ತಪ್ಪೆಂದು ಭಾವಿಸಿ ಸ್ವಲ್ಪ ಹೊತ್ತು ಸುಮ್ಮನಿದ್ದರು.

ಆ ಶಾಂತ ವಾತಾವರಣದಲ್ಲಿ ಯಾರೂ ಮಾತನಾಡಲಿಲ್ಲ ಆದರೆ ಇವನಲ್ಲಿ ಕನಿಕರಗೊಂಡ ಓರ್ವ ಯುವತಿ ಮುಂದೆ ಬಂದು " ತಮ್ಮ ಮನ ವನ್ನು ಬಿಚ್ಚಿ ಕಾರಣ ಹೇಳಿಬಿಡಿ" ಎಂದು ಕೇಳಿಕೊಂಡಳು.

ಇವಳ ಮಾತಿಗೆ ಮಾರುತ್ತರವಾಗಿ " ನಾನೇನು ಹೇಳಲಿ. ನಿಮ್ಮೆಲ್ಲ ರನ್ನೂ ನೋಡಿದಾಗ ಮನೆಯಲ್ಲಿರುವ ತಾಯಿಯಿಲ್ಲದ ನನ್ನ ಬಾಲಿಕೆಯ ರಿಬ್ಬರು ನೆನಪಿಗೆ ಬರುವರು " ಎಂದು ನುಡಿದು ಅವನಲ್ಲಿಂದ ಮೆಲ್ಲಗೆ ಹೆಜ್ಜೆಯನ್ನಿಡುತ್ತ ಮನೆಯ ಕಡೆ ಹೊರಟ ನೆರೆದ ಯುವತಿಯರು ತಮ್ಮ ಅಸಭ್ಯ ವರ್ತನೆಗೆ ಮರುಗಿದರು

(—Virtue)

# ಕರುಳಿನ–ಕೊರಗು

ನಮ್ಮ ಮನೆಯ ಪಡಸಾಲೆಯಲ್ಲಿ ಅಂದು ಹರಟೆ ಕೊಚ್ಚುತ್ತ ಕುಳಿತಿದ್ದೆವು ಗಂಡಸರು ಮಾತ್ರ ಹರಟೆಗೆ ನೆರದಿದ್ದರು ಅಂದಿನ ಹರಟೆಯಲ್ಲಿ ಅನೇಕ ವಿಷಯಗಳು ಚರ್ಚೆಗೆ ಬಂದು ಹೋದವು; ಅವುಗಳಲ್ಲಿ ಮುಖ್ಯವಾದವು ನಮ್ಮ ಮನೆತನಕ್ಕೆ ಹಿರಿಯರಿಂದ ಬಂದ ಆಸ್ತಿ, ಮತ್ತು ಪರಂಪರಾಗತವಾಗಿ ನಮ್ಮಲ್ಲಿ ಮನೆಮಾಡಿಕೊಂಡಿರುವ ಕೆಲವು ಮನೆತನದ ಮರ್ಯಾದೆಗಳು. ನಾವೀರೀತಿಯಾಗಿ ಮಾತಿನಲ್ಲಿ ಮೈಮರೆತಿರುವಾಗ ಒಳಮನೆಯಿಂದ ನಮ್ಮ **ಮನೆಯ ಹಿರಿಯ**ರೆನಿಸಿಕೊಂಡವರೂ **ಊರ ವಕೀಲ**ರೆನಿಸಿಕೊಂಡವರೂ ಆದ ಭ್ರೂಮಾಂಟರು ನಮಗೆ ತಿಳಿಯದಂತೆ ಬಂದು ನಿಂತಿದ್ದರು. ಅವರು ನಮ್ಮನ್ನು ಉದ್ದೇಶಿಸಿ, "ನಮ್ಮ ವ್ಯವಹಾರದಲ್ಲಿ ನಾನು ಅನೇಕ ಮಹತ್ವದ ಮತ್ತು ಕ್ಲಿಷ್ಟವಾದ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ ಒಂದು ದಿನ ಒಬ್ಬ ಪಕ್ಷಗಾರನ ಮನೆಗೆ ಕರೆ ಬಂದಿದ್ದುದರಿಂದ ಹೋಗಬೇಕಾಯಿತು ಅಲ್ಲಿ ನಾನು ನಿರ್ಧರಿಸಬೇಕಾದದು ಸರ್ವ ಸಾಮಾನ್ಯವಾದ ವಿಷಯವಾದರೂ ದಿನವಹಿ ಜೀವನದಲ್ಲಿ ನಡೆದು ಹೋಗುವ ವಿಷಯವಾದರೂ ಅದೇಕೋ ಸ್ವಲ್ಪ ವಿಚಿತ್ರವಾದುದೆಂದೆನಿಸಿತು ಒಂದು ಮನೆಯ ಆಸ್ತಿಗೆ ಹಕ್ಕುದಾರನು, ಗುಪ್ತವಾಗಿ ಮಾಯವಾದುದರಿಂದ ಅವನನ್ನು ಕಂಡು ಹಿಡಿಯುವ ಮಹತ್ವದ ಕೆಲಸ ನನ್ನ ಪಾಲಿನದಾಗಿದ್ದಿತು ಅದರ ವಿವರಗಳು ಹೀಗಿದ್ದವು!" ಎಂದು ತಮ್ಮ ಅನುಭವವನ್ನು ಹೇಳತೊಡಗಿದರು

"ಆರು ತಿಂಗಳ ಹಿಂದೆ, ನಾನೊಂದು ಪಕ್ಷಗಾರಳ ಮನೆಗೆ ಹೋಗಬೇಕಾಯಿತು. ನಾನವಳಲ್ಲಿಗೆ ಹೋದಾಗ ಅವಳು ಸಾಯುವ ಅವಸ್ಥೆಯಲ್ಲಿದ್ದಳು. ನನ್ನನ್ನು ಕಂಡು ಹತ್ತಿರ ಬರಮಾಡಿಕೊಂಡು ಹೀಗೆಂದಳು: 'ಮಹರಾಯರೆ, ನಿಮ್ಮ ಕೈಯಲ್ಲಿ ಒಂದು ಮಹತ್ವದ ವಿಷಯವನ್ನಿಟ್ಟು ಸಾಯಬೇಕೆಂದಿದ್ದೇನೆ. ನನ್ನ ಹಾಸಿಗೆಯ ಕೆಳಗಿರುವ ಈ ಆಸ್ತಿಪತ್ರವನ್ನು ಅವಲೋಕಿಸಿ. ಇದರಲ್ಲಿ ಕಾಣಿಸಿರುವ ನನ್ನ ಮಗನೆಲ್ಲಿರುವನೆಂಬುದನ್ನು ನನ್ನ ಮರಣಾಂತರ ಕಂಡು ಹಿಡಿಯುವ ಕೆಲಸ ನಿಮ್ಮದು. ನಿಷ್ಕಪಟದಿಂದ ಕೆಲಸ ಮಾಡಿ ನೀವು ಆ ಕೆಲಸದಲ್ಲಿ ಅಯಶಸ್ವಿಗಳಾದರೆ ನಿಮಗೆ ಐವತ್ತು ಸಾವಿರ

ರೂಪಾಯಿಗಳು ಪ್ರತಿಫಲ ದೊರೆಯುವುದು ಕೆಲಸದಲ್ಲಿ ವಿಜಯಿಗಳಾದರೆ ಒಂದು ಲಕ್ಷ ರೂಪಾಯಿಗಳ ವರಮಾನ ನಿಮ್ಮದು' ಎಂದು ಹೇಳುತ್ತ ಮೆಲ್ಲಗೆ ಏಳುವುದಕ್ಕೆ ಪ್ರಯತ್ನಿಸಿದಳು. ನನ್ನ ನೆರವಿನಿಂದ ಹಾಸಿಗೆಯಲ್ಲಿಯೇ ಎದ್ದು ಕೂತಬಳಿಕ ಸ್ವಲ್ಪ ವಿರಳವಾಗಿಯೂ, ಸ್ಪಷ್ಟವಾಗಿಯೂ ಮಾತ ನಾಡಲು ಅವಳಿಗೆ ಅನುಕೂಲವಾಯಿತು. ಅವಳು ಬಹಳ ಶ್ರೀಮಂತಳಂತೆ ಕಂಡು ಬಂದಳು, ಅಲ್ಲದೆ ಆಮನೆಯ ನಿರ್ಮಿತದಲ್ಲಿ ಒಂದು ಬಗೆಯ ಸೊಗಸು ಸೌಂದರ್ಯ, ಸ್ವಚ್ಛಂದ, ಸರಳತೆ ಕಂಡುಬಂತು ಮನೆಯ ವಾತಾವರಣವು ಗಂಭೀರವಾಗಿದ್ದಿತು. ಆಡಿದ ಮಾತುಗಳೆಲ್ಲವೂ ಸ್ಪಷ್ಟ ಕೇಳಿಸುವಷ್ಟು ವಿಶಾಲವಾಗಿದ್ದಿತು. ಅವಳು ಮಲಗಿದ ಒಳಮನೆ, ಇದಲ್ಲವೂ ನನ್ನನ್ನು ಮೂಕನನ್ನಾಗಿಸಿತು.

"ಅವಳು ಮತ್ತೆ ತನ್ನ ಕತೆಯನ್ನು ಹೇಳಲಾರಂಭಿಸಿದಳು:

'ಅಗಾಧವಾದ ನನ್ನಾತ್ಮಚರಿತ್ರೆಯನ್ನು ಕೇಳುವವರಲ್ಲಿ ನೀವೇ ಮೊದಲಿಗರು. ಈಗಿನ ನನ್ನ ಹೀನಾವಸ್ಥೆಯಲ್ಲಿ ನನ್ನ ಮನೆತನದ ಇತಿಹಾಸವೆಲ್ಲವನ್ನೂ ಹೇಳುವವರೆಗೆ ನಾನು ಜೀವಂತವಿದ್ದರೆ ಸಾಕು ತಮ್ಮ ವಿಶಾಲ ಹೃದಯತೆ, ಕಾರ್ಯತತ್ಪರತೆಯ ವಿವರಗಳನ್ನರಿತುದರಿಂದಲೇ, ನೀವು ನನ್ನ ಕಡೆಯ ಇಷ್ಟವನ್ನು ಪೂರ್ತಿ ಮಾಡುವಿರೆಂಬ ಭರವಸೆ ನನಗಿದ್ದುದರಿಂದಲೇ, ನಿಮ್ಮ ಮುಂದೆ ಎಲ್ಲವನ್ನೂ ಬಿಚ್ಚಿಹೇಳುವ ಸಾಹಸಮಾಡಿದ್ದೇನೆ ನನ್ನಂತಹ ಅನಾಥಳಿಗೆ ಕರುಣೆ ತೋರುವ ದಯಾಳತ್ವ ತಮ್ಮಲ್ಲಿದೆಯೆಂದು ನಾನು ನಂಬಿದ್ದೇನೆ.

'ನನ್ನ ಮದುವೆಗಿಂತ ಮುಂಚೆ ನಾನೋರ್ವ ಯುವಕನನ್ನು ಪ್ರೀತಿಸಿದ್ದೆ. ಈ ನಮ್ಮ ಪ್ರೀತಿಯ ಮಿಲನಕ್ಕೆ ಹಿರಿಯರ ಸಮ್ಮತಿ ದೊರೆಯಲಿಲ್ಲ; ಕಾರಣ ಆತನ ಬಡತನ ಈ ಪ್ರೇಮಸಂಬಂಧ ಬೆಳೆದ ಕೆಲವು ಕಾಲದ ನಂತರ, ಹಿರಿಯರ ಒತ್ತಾಯದಿಂದಲೂ, ಪ್ರಪಂಚಜ್ಞಾನ ಹೆಚ್ಚಿಲ್ಲದಿದ್ದುದರಿಂದ ಅವರನ್ನೆದುರಿಸುವ ಶಕ್ತಿ ಸಾಲದಿದ್ದುದರಿಂದಲೂ, ಒಂದು ಬಗೆಯ ನಿರಾಶೆಯಿಂದಲೂ, ನಾನೊಬ್ಬ ಶ್ರೀಮಂತನನ್ನು, ಮನಸ್ಸಿಲ್ಲದಿದ್ದರೂ ಮನೆತನದ ನಡತೆಗನುಸರಿಸಿ ಮದುವೆಯಾಗಬೇಕಾಯಿತು ಆ ಕಾಲದ ಅನೇಕ ಹುಡುಗಿಯರಂತೆ ಸಾಂಪ್ರದಾಯದ ಆಚರಣೆಗೆ ಬಲಿಯಾದೆ.

ನನಗೊಬ್ಬ ಗಂಡುಮಗು ಹುಟ್ಟಿದ ಕೆಲವು ವರುಷಗಳ ನಂತರ ನಾನು ವಿಧವೆಯಾದೆ.

'ಮದುವೆಗಿಂತ ಮೊದಲು ಪ್ರೀತಿಸಿದ ಆ ಯುವಕ ಬೇರೊಬ್ಬಳನ್ನು ಮದುವೆಯಾದ ನಾನು ವಿಧವೆಯಾದುದು ತಿಳಿದನಂತರ ನನ್ನ ನೆರವಿಗೆ ಅವನು ಬಾರದೆ ಅಸ್ವತಂತ್ರನಾದುದಕ್ಕೆ ಬಹಳ ಮರುಗಿದ ನನಗನೇಕ ಸಲ ಭೆಟ್ಟಿಯನ್ನಿತ್ತ; ಅವನ ಅಂತಃಕರಣಪೂರ್ವಕ ದುಃಖವನ್ನು ತೋಡಿ ಕೊಂಡು ಮರುಗಿದ ಅವನಿಗೆ ನನ್ನಲ್ಲಿರುವ ಮಮತೆ, ವಿಶ್ವಾಸ, ಪ್ರೀತಿ ಯನ್ನು ಕಂಡು ನನಗೆ ದುಃಖ ಉಕ್ಕೇರಿತು ನನ್ನ ಕಷ್ಟದಲ್ಲಿ ಸ್ನೇಹಿತನಂತೆ ನೆರವಾಗುವುದಕ್ಕೆ ಬಂದವರಲ್ಲಿ ಆತನೇ ಮೊದಲನೆಯವನು ನಾನೊಬ್ಬಳೇ ದುಃಖದಲ್ಲಿದ್ದಾಗ ನನ್ನನ್ನು ಉಪಚರಿಸಲು ಬಂದಾಗ ಅವನನ್ನು ಒರಮಾಡಿ ಕೊಳ್ಳದೆ ಇರಲಿಕ್ಕಾಗಲಿಲ್ಲ. ನಾನೊಬ್ಬಳೇ, ಏಕಾಕಿನಿಯಾಗಿ, ಅನಾಥೆ ಯಾಗಿ, ದೊಡ್ಡ ಮನೆಯಲ್ಲಿ ದುಃಖದಲ್ಲಿರುವಾಗ ಇವನ ಸಹವಾಸದಲ್ಲಿ ಮಾತುಕತೆಯಾಡುವುದು ಸುಖಕರವೆನಿಸಿತು ಮನಸ್ಸಿಗೆ ಸಮಾಧಾನವನ್ನೀ ಯಲು ಬರುತ್ತಿದ್ದ ಈ ಮಿತ್ರನಿಂದ ದೂರವಿರಲು ಸಾಧ್ಯವಾಗಲಿಲ್ಲ ನನ್ನ ಏಕಾಂತದ ಏಕಾಂತತೆಯನ್ನು ದೂರಮಾಡಲು ಇವನು ಬರುತ್ತಿದ್ದುದು ನನಗೆ ಬೇಕಾದ ಸನ್ನಿವೇಶವೆನಿಸಿತು ಹಿಂದೆ ಅವನಲ್ಲಿ ನನಗಿದ್ದ ಪ್ರೀತಿ ಮತ್ತೆ ಚಿಗುರಿತು. ಹೊರಗಿನ ಪ್ರಪಂಚಕ್ಕೆ ನಾನು ತಪ್ಪು ಹಾದಿ ಹಿಡಿಯು ವಂತೆನಿಸಿದರೂ, ಅದು ನನ್ನ ಮನಸ್ಸಿಗೆ ಅಸಮಂಜಸವೆನಿಸಲಿಲ್ಲ. ಹೆಣ್ಣಿನ ಯಾತನೆ ತಿಳಿಯುವುದು ಬಹಳ ಕಠಿಣವೆಂಬ ಮಾತು ಎಲ್ಲರಿಗೂ ತಿಳಿದ ವಿಷಯವೇ

' ನನ್ನ ಮಾತಾಪಿತೃಗಳನ್ನು ಕಳಕೊಂಡ ನನಗೆ ಅವನೊಬ್ಬನೇ ದಿಕ್ಕೆಂದು ನನಗೆನಿಸಿತು ಅನೇಕ ಸಲ ನಾನು ಅವನೊಂದಿಗೆ ದಿನರಾತ್ರಿಗಳು ಕಳೆಯುವುದು ತಪ್ಪೆಂದು ಒಂದೊಂದು ಸಲ ಎನಿಸುತ್ತಿತ್ತು ಆದರೆ ಅವನನ್ನು ಕಂಡೊಡನೆಯೇ ಆ ಸಂಕಲ್ಪ ಮಾಯವಾಗುತ್ತಿತ್ತು.

'ಅವನು ನನ್ನ ಪ್ರಿಯನಾದ-ನನ್ನ ಹೃದಯಕ್ಕೆ ಮಾತ್ರ. ಅವನು ನನ್ನ ಅವಿವಾಹಿತ ಗಂಡನಾದ ಇದು ಹೇಗೆ ಸಂಭವಿಸಿತೆಂಬುದು ವರ್ಣಿಸ ಲಾರೆ. ಇದು ಹೇಗೆ ನಡೆದುಹೋಯಿತೆಂಬುವುದರ ಅರಿವೂ ನನಗಿರಲಿಲ್ಲ.

ಸಣ್ಣ ವಯಸ್ಸಿನಿಂದಲೂ ಬೆಳೆದುಬಂದ ನಮ್ಮ ಪರಸ್ಪರ ಪ್ರೀತಿಯ ಹೃದಯಗಳು ಈ ರೀತಿ ಮಿಲನವಾಗುವುದು ಅಸಹಜವೆನಿಸಲಿಲ್ಲ – ಅನಿವಾರ್ಯವೆನಿಸಿತು. ಸಹಜವಾಗಿ ಉಕ್ಕಿಬರುವ ಪ್ರೀತಿಯನ್ನು ತಡೆಯುವುದು ಕಷ್ಟವೆಂಬುವುದು ಅನುಭವಿಸಿದವರಿಗೇ ತಿಳಿದ ವಿಷಯ ನಾನದನ್ನು ಹೇಗೆ ಚಿತ್ರಿಸಲಿ ? ಇದನ್ನು ತಡೆಯುವುದು, ತ್ಯಾಗಿ ಯೋಗಿಗಳಿಗೇ ಸಾಧ್ಯ; ಸರ್ವಸಾಮಾನ್ಯ ಜನರಿಗೆ ಇದು ಆಗದ ಕೆಲಸ

'ಈ ಬಗೆಯಾಗಿ ದಂಪತಿಗಳಂತೆ ನಾವಿಬ್ಬರೂ ಹನ್ನೆರಡು ವರ್ಷಗಳು ಕೂಡಿ ಕಳೆದೆವು; ನಮ್ಮ ಜೀವನ ಸುಖಮಯ, ಆನಂದಮಯವಾಗಿದ್ದಿತು. ಕಾಲವು ಬಹುಬೇಗ ಹೊರಳಿದಂತೆ ಭಾಸವಾಗುತ್ತಿತ್ತು. ನಾನು ವಿಧವೆಯೆಂಬ ಕಲ್ಪನೆಯೇ ಆಗಲಿಲ್ಲ ಯೌವನದ ಭರದಲ್ಲಿ ನನಗೆ ಬೇರೊಂದು ವಿಷಯ ನೆನಪಿಗೆ ಬರಲೇ ಇಲ್ಲ ಅದೇ ಸಮಯದಲ್ಲಿ ನನ್ನ ಈ ಪ್ರೀತಿಪಾತ್ರನಾದ ಸ್ನೇಹಿತನ ಹೆಂಡತಿಯೊಂದಿಗೂ ನನಗೆ ಹೆಚ್ಚಿನ ಸ್ನೇಹ ಬೆಳೆಯಿತು. ಆದರೆ ನಮ್ಮ ರಹಸ್ಯ ವ್ಯಾಪಾರದ ಗುಟ್ಟು ಮಾತ್ರ ಆ ಮುಗ್ಧೆಗೆ ತಿಳಿದಿರಲಿಲ್ಲ. ನಂಬಿದ ಅವಳಿಗೆ ನಾನು ಮೋಸಮಾಡುತ್ತಿರುವೆನಲ್ಲಯೆಂದು ಒಂದೊಂದು ಸಲ ಎನಿಸುತ್ತಿತ್ತು. ಆದರೆ ಮರುಕ್ಷಣ ನನ್ನ ಗುಂಗಿನಲ್ಲಿ ಎಲ್ಲವನ್ನೂ ಮರೆಯುತ್ತಿದ್ದೆ

'ಅವಳೂ, ನಾನೂ ಸೇರಿ ನನ್ನ ಮಗುವನ್ನು ಪ್ರೀತಿಯಿಂದ ಕೂಡಿ ಬೆಳೆಸುತ್ತಿದ್ದೆವು; ನಮ್ಮ ಅಕ್ಕರೆಯಿಂದ ಅವನೊಬ್ಬ ಯೋಗ್ಯಮನುಷ್ಯನಂತೆ ಬೆಳೆದ ಗರ್ವಪಡಬೇಕಾದ ಮನುಷ್ಯನಾದ ಅವನು ಯೋಗ್ಯ ಗುಣಗಳ ಗಣಿಯಾದ ವಿಶಾಲಹೃದಯತೆಯುಳ್ಳವನೂ, ಮನಸ್ಥೈರ್ಯ ಗುಣವಂತನೂ, ಬುದ್ಧಿಶಾಲಿಯೂ ಆದ. ಅವನನ್ನು ಕಂಡರೆ ನನಗೆ ಹೆಚ್ಚಿನ ಹೆಮ್ಮೆಯೆನಿಸುತ್ತಿತ್ತು. ಅವನೊಬ್ಬ ಹದಿನೇಳು ವರುಷದ ಯುವಕನಾಗುವುದನ್ನು ಕಂಡು ಹಿಗ್ಗಿದೆ

'ನನ್ನ ಮಗನು ನಮ್ಮಿಬ್ಬರನ್ನೂ ಪ್ರೀತಿಸುತ್ತಿದ್ದನು. ಅವನು ಆತನನ್ನು **ಆಪ್ತಸ್ನೇಹಿತ**ನೆಂದು ಕರೆಯುತ್ತಿದ್ದನು ಅವನೆಂದರೆ ಅವನಿಗೆ ಅಮಿತ ಪ್ರೀತಿ, ವಿಶ್ವಾಸ. ಅವನ ಮಾತುಗಳನ್ನು ಶ್ರದ್ಧೆಯಿಂದ ಕೇಳುತ್ತಿದ್ದನು. ತಂದೆಯನ್ನು ಕಳಕೊಂಡಿದ್ದರೂ ಇವನ ಜತೆಯಲ್ಲಿ ಅದರ ಅರಿವು

ಅವನಿಗೆ ಆಗುತ್ತಿರಲಿಲ್ಲ. ಈತನೇ ತನ್ನ ಮಾರ್ಗದರ್ಶಕನೆಂಬ ಭಕ್ತಿಯ ಭಾವನೆ ಅವನಿಗಿದ್ದಿತು. ಅವರಿಬ್ಬರ ಪ್ರೇಮ-ವಾತ್ಸಲ್ಯದ ಜೀವನವನ್ನು ಹೇಗೆ ವರ್ಣಿಸಲಿ ?

'ನನ್ನ ಮಗನು ನನ್ನ ಮಿತ್ರನ ಬಗ್ಗೆ ಯಾವ ಬಗೆಯ ವಿವರಗಳನ್ನೂ ತಿಳಿಯಲು ಆತುರನಾಗಿರಲಿಲ್ಲ ಅವನ ಈ ಮೌನದ ಕಾರಣವನ್ನು ತಿಳಿಯಲು ನಮ್ಮಿಬ್ಬರಿಗೂ ಉತ್ಸುಕತೆಯಿತ್ತು. ಆದರೆ ಕೇಳುವುದಾದರೂ ಹೇಗೆ?

'ಒಂದು ಹಬ್ಬದ ಸಂಜೆ, ವಾಡಿಕೆಯಂತೆ ನಾವು ಮೂವರೂ ನಮ್ಮ ಮನೆಯಲ್ಲಿ ಸೇರಿ ಊಟಮಾಡಬೇಕೆಂದು ನಿಶ್ಚಯವಾಗಿತ್ತು. ಇವರಿಬ್ಬರಲ್ಲಿ ಯಾರು ಮೊದಲು ಬರುವರೋ ಎಂದು ಕಾದಿದ್ದೆ. ಬಾಗಿಲು ತೆಗೆದಾಗ ನನ್ನ ಮಿತ್ರನೇ ಮೊದಲಿಗೆ ಬಂದನು ಆತುರದಿಂದ ನಾನು ತೆರೆದ ತೋಳುಗಳಿಂದ ಅವನನ್ನು ಆಲಿಂಗಿಸಿದೆ ಸಂತಸದ ಭರದಲ್ಲಿ ನನ್ನನ್ನು ಅವನು ಮುದ್ದಿಟ್ಟ

'ನಮ್ಮ ಮಿಲನದಲ್ಲಿ ನಾವಿರಲು ಯಾರೋ ಬಂದಂತೆ ಭಾಸವಾಯಿತು. ನಮಗೆ ತಿಳಿಯದಂತೆ ಮೆಲ್ಲನೆ ಮನೆಯೊಳಕ್ಕೆ ಪ್ರವೇಶಿಸಿದ್ದವನು ನನ್ನ ಮಗನೇ ! ನಾವಿಬ್ಬರೂ ಪ್ರೇಮದಾಲಿಂಗನದಲ್ಲಿದ್ದುದನ್ನು ಕಂಡು ದಿಗ್ಭ್ರಮೆಗೊಂಡು ಒಂದೇ ಸಮನೆ ನೋಡುತ್ತ ನಿಂತುಬಿಟ್ಟ; ಮಾತಿಲ್ಲದ ಅವನ ಈ ವಿಸ್ಮಯನೋಟ ನಮ್ಮಿಬ್ಬರನ್ನೂ ಬೆದರಿಸಿತು. ಇದಲ್ಲವೂ ವೇಗವಾಗಿ ನಡೆದು ಹೋಯಿತು. ಮಮತೆಯ ಕರೆಯಿಂದ ನನ್ನ ಮಗನನ್ನು ಸಮೀಪಿಸಿದೆ. ಆದರೆ ಅವನಲ್ಲಿರಲಿಲ್ಲ ಹೊರಗೆ ಹೊರಟುಹೋಗಿದ್ದ

'ನಂತರ ನಾವಿಬ್ಬರೂ ಎದುರಾಗಿ ನಿಂತೆವು; ಮೌನದಲ್ಲಿ ನಿಶ್ಚೇಷ್ಟಿತರಾದ ನಮಗೆ ಮಾತನಾಡಲು ಬಲವಿರಲಿಲ್ಲ. ನಿರ್ಬಲತೆಯಿಂದ, ನಿರಾಶೆಯಿಂದ ನನ್ನೆದೆ ನೀರಾಯಿತು. ನಿಲ್ಲಲು ತ್ರಾಣವಿಲ್ಲದೆ ಹತ್ತಿರದ ಕುರ್ಚಿಯ ಮೇಲೆ ಒರಗಿದೆ ಕವಿದ ಆ ಕತ್ತಲಿನಲ್ಲಿ, ಹೊರಗೆ ತಿಳಿಗಾಳಿಯಲ್ಲಿ ಎಲ್ಲಿಗಾದರೂ ಹೊರಟುಹೋಗಲೇ ಎಂದೆನಿಸಿತು. ಮನೆಯಲ್ಲಿ ಕುಳಿತಿರಲು ಮನಸ್ಸಿರಲಿಲ್ಲ. ನನ್ನೊಬ್ಬ ಮಗನೆದುರು ನಮ್ಮ ಗುಟ್ಟು ರಟ್ಟಾಯಿತಲ್ಲ ಎಂಬ ಅಪಹಾಸ್ಯದ ನೋವು ನನ್ನನ್ನು ನಿರ್ವಿಣ್ಣಳನ್ನಾಗಿ ಮಾಡಿತು. ಮಗನೆದುರಿಗೆ ನನ್ನ ಮರ್ಯಾದೆ ಹೋಯಿತಲ್ಲ ಎಂಬ ತಾಪ ನನ್ನ ದುಃಖವನ್ನು

ಹೆಚ್ಚಿಸಿತು. ದುಃಖದ ಆವೇಶದಲ್ಲಿ ಅತ್ತುಬಿಟ್ಟೆ ಹುಡುಗಿಯಂತೆ. ಹುದುಗಲಾರದ ದುಃಖ ನನ್ನನ್ನಾವರಿಸಿ ನನ್ನ ಹೃದಯವನ್ನು ಹಣ್ಣುಮಾಡಿತು. ಹೆತ್ತತಾಯಿಯ ಮಾನ, ಮಗನೆದುರು ಹೋಗುವುದು ಎಂತಹ ನೋವನ್ನುಂಟುಮಾಡುವುದೆಂಬುವುದು ನಾನು ವರ್ಣಿಸಲಾರೆ; ಹೇಳಲು ನನಗೆ ಮಾತುಗಳು ಬಾರದಾಗಿವೆ.

'ನನ್ನ ಜೀವದ ಗೆಳೆಯನೂ ತಾಪದಿಂದ ನೊಂದಿಕುದಿಯುತ್ತಿದ್ದುದು, ನನಗೆ ಕಂಡುಬರುತ್ತಿತ್ತು ಸಂತೈಸುವ ಮಾತುಗಳನ್ನಾಡಿ ಅವನು—ನನ್ನ ಮಗನನ್ನು ಕಂಡು ಎಲ್ಲವನ್ನೂ ವಿವರಿಸಿ, ವಿಶದೀಕರಿಸಿ, ತಿಳಿಯಹೇಳುವೆನೆಂದು ಹೇಳುತ್ತ ನನ್ನನ್ನು ಹಿಂಬಾಲಿಸಿದನು ಮತ್ತು ಅವಸರದಿಂದ ಅವನನ್ನು ಹುಡುಕಲು ಹೊರಟುಹೋದ

'ಆ ಕೋಣೆಯಲ್ಲೊಬ್ಬಳೇ ಕುಳಿತೆ. ನನ್ನಿನಿಯನ ಬರುವಿಕೆಯ ಹಾದಿಯನ್ನು ಕಾಯುತ್ತ ಕುಳಿತಿರುವಾಗ ಸ್ವಲ್ಪ ಸಪ್ಪಳವಾದರೂ ನನ್ನೆದೆ ಭೀತಿಗೊಳ್ಳುತ್ತಿತ್ತು ಕುಲಿಮೆಯಲ್ಲಿ ಬೆಂಕಿ ಉರಿಯುತ್ತಿರುವಾಗ ಆಗುವ ಸ್ವಲ್ಪ ಸಪ್ಪಳವೂ ನನ್ನನ್ನು ಬೆದರಿಸುತ್ತಿತ್ತು ಈ ಬಗೆಯ ಆಶೆ—ನಿರಾಶೆಗಳ ಹೊಯ್ದಾಟದ, ಈ ಸಂಕಟದಲ್ಲಿ ಒಂದೆರಡು ತಾಸುಗಳ ಕಾಲ ಕಳೆದು ಹೋಯಿತು. ಆ ಸಮಯದಲ್ಲಿ ನಾನನುಭವಿಸಿದ ಯಾತನೆ ಅವರ್ಣನೀಯ. ಕೊಲೆಗಡುಕನಂತಿತ್ತು ನನ್ನ ಅವಸ್ಥೆ. ನಡುರಾತ್ರಿಯ ವೇಳೆಗೆ ನನ್ನ ಮಿತ್ರನಿಂದೊಬ್ಬ ಆಳು, ಕಾಗದ ತಂದ ಅದರಲ್ಲಿ ಹೀಗೆ ಬರೆದಿತ್ತು:

"ನಿನ್ನ ಮಗ ಮನೆಗೆ ಬಂದಿದ್ದಾನೆಯೆ? ನಾನು ಬಹಳ ಹುಡುಕಿದೆ, ನಿರಾಶನಾದೆ: ಬಹಳ ದಣಿವಾಗಿದೆ; ಮಲಗಿದ್ದೇನೆ. ಈ ವೇಳೆಯಲ್ಲಿ ನಿನ್ನನ್ನು ಕಾಣುವುದು ಉಚಿತವಲ್ಲವೆಂದು ಈ ಪತ್ರ ಬರೆದಿರುವೆ."

ಇದಕ್ಕೆ ಮಾರುತ್ತರವಾಗಿ 'ಮಗನು ಇನ್ನೂ ಮನೆಗೆ ಬಂದಿಲ್ಲ ನೀನವನನ್ನು ಹುಡುಕಲೇಬೇಕು' ಎಂದು ಬರೆದು ತಿಳಿಸಿದೆ. ಅವನಿಗಾಗಿ ರಾತ್ರಿ ಎಲ್ಲವೂ ಅದೇ ಆರಾಮಾಸನದ ಮೇಲೆಯೇ ಕುಳಿತಿದ್ದೆ, ನಿದ್ದೆಬರಲಿಲ್ಲ.

'ನನಗೆ ಹುಚ್ಚುಹಿಡಿದಂತಾಗಿತ್ತು. ಮನೆಯಲ್ಲಿ ಹರಿದಾಡಿ, ನೆಲದ ಮೇಲೆ ಉರುಳಿಸಬೇಕೆಂದೆನಿಸಿತ್ತು. ಆದರೂ ನಿಶ್ಚಲತೆಯಿಂದ ಕುಳಿತ ಸ್ಥಳ ಬಿಟ್ಟೇಳಲಿಲ್ಲ. ಯೋಚಿಸಿದೆ: ಊಹಾಸಾಮ್ರಾಜ್ಯದಲ್ಲಿ ಕನಸು ಕಂಡೆ.

ಎಲ್ಲವೂ ಮಸಕಾಗಿ ಕಾಣುತ್ತಿತ್ತು; ಎಲ್ಲವೂ ಒಗಟಾಗಿಯೇ ತೋರುತ್ತಿತ್ತು. ಎಷ್ಟು ಮಥಿಸಿದರೂ ಸಮಸ್ಯೆಯು ಬಹು ಕ್ಲಿಷ್ಟವಾಗುವಂತೆ ಕಂಡುಬಂತು

'ಯೋಚನಾಲಹರಿ ಇನ್ನೊಂದು ಸನ್ನಿವೇಶದ ಕಡೆ ಜಾರಿತ್ತು. ಇವರಿಬ್ಬರೂ ಕಲೆತರೆ, ನಮ್ಮ ರಹಸ್ಯಜೀವನದ ವಿವರಗಳೆಷ್ಟು ಹೊರಬೀಳುವವೋ ಎಂಬ ಸಂಕಟ, ನನ್ನನ್ನು ಪೀಡಿಸತೊಡಗಿತು ಮುಂದೆ ಮಗನ ಭವಿತವ್ಯವೇನು ? ನನ್ನ ಗತಿಯೇನೆಂಬ ಯೋಚನೆ ನನ್ನನ್ನು ಅಧೀರಳನ್ನಾಗಿ ಮಾಡಿತು

'ನನ್ನ ಮನೆಯ ದಾದಿ ಮಾರನೆಯ ದಿನ ಬಂದು ನನ್ನ ವರ್ತನೆಯಲ್ಲಿ ಕಂಡುಬರುವ ಈ ಬದಲಾವಣೆಯ ಕಾರಣವನ್ನರಿಯಲು ತವಕಿಸಿದಳು ನೊಂದ ಹೃದಯದ ಬೇಗೆಯನ್ನೂ ಅವುಗಳ ವಿವರವನ್ನೂ ಅವಳ ಮುಂದೆ ಹೇಗೆ ಹೇಳುವುದು ? ನನ್ನ ಬುದ್ಧಿ ಸ್ಥಿಮಿತದಲ್ಲಿರಲಿಲ್ಲ ನನ್ನ ಮಾತುಗಳಲ್ಲಿ ತಿಳಿವಿರಲಿಲ್ಲ. ಅವಳನ್ನು ಬೆದರಿಸಿ ದೂರ ಕಳಿಸಿಬಿಟ್ಟೆ ಅವಳು ಮತ್ತೆ ಡಾಕ್ಟರನೊಂದಿಗೆ ಬರುವ ಹೊತ್ತಿಗೆ ನಾನು ಅರ್ಧ ಉನ್ಮಾದಾವಸ್ಥೆಯಲ್ಲಿದ್ದೆ

'ನನ್ನನ್ನು ಹಾಸಿಗೆಯ ಮೇಲೆ ಮಲಗಿಸಿದ್ದರು ಮಿದುಳಿನ ಜ್ವರವೆಂಬ ಜೇನೆ ನನ್ನನ್ನಾವರಿಸಿದ್ದಿತು ನನಗೆ ಪೂರ್ಣ ಎಚ್ಚರವಾಗಬೇಕಾದರೆ ಬಹಳ ದಿನಗಳುರುಳಿದವಂತೆ ಅನೇಕ ದಿನಗಳು ಎಚ್ಚರವಿಲ್ಲದೆ ಹಾಸಿಗೆಯಲ್ಲಿ ಮಲಗಿದ್ದ ನಾನು ಎಚ್ಚತ್ತ ಸಮಯದಲ್ಲಿ ಮೊದಲು ಕಂಡುದು ನನ್ನ ಪ್ರೀತಿಯ ಜೀವದ ಗೆಳೆಯನನ್ನು ಅವನನ್ನು ಕಂಡೊಡನೇ 'ನನ್ನ ಮಗ! ನನ್ನ ಮಗನೆಲ್ಲಿ'' ಎಂದು ಚೀರಿಕೊಂಡೆ

ಅವನು ದುಃಖದಿಂದ 'ಸಮಾಧಾನ ಹೊಂದು ಸಕಲ ಪ್ರಯತ್ನಗಳೂ ವಿಫಲವಾದವು ಅವನೆಲ್ಲಿರುವನೆಂಬುದು ತಿಳಿಯಲೇ ಇಲ್ಲ ನನ್ನಪರಾಧವೇನೂ ಇಲ್ಲ' ಎಂದು ಹೇಳಿ ಸುಮ್ಮನಾದ

'ನಿರಾಶೆಯಿಂದ ಬೆಂದ ನನ್ನ ಹೃದಯಕ್ಕೆ ಸಮಾಧಾನವಾಗಲಿಲ್ಲ ನನ್ನ ಮಗನ ಸುಳಿವೇ ತಿಳಿದಿಲ್ಲವೆಂಬ ಸಂಕಟ ನನ್ನನ್ನು ಕೆರಳಿಸಿತು; ಕೋಪವು ಇಮ್ಮಡಿಯಾಯಿತು ಆವೇಶದಲ್ಲಿ ಅವನನ್ನುದ್ದೇಶಿಸಿ 'ನಿನ್ನ ಕರ್ತವ್ಯ ನೀನು ಸರಿಯಾಗಿ ಮಾಡಿಲ್ಲ ಅವನೊಂದಿಗಲ್ಲವೆ ನೀನು ಮತ್ತೆಂದು ಸಲ ನನ್ನನ್ನು ಕಾಣಲು ಬರಬೇಡ. ನಿನ್ನ ಮುಖ ನೋಡಲಾರೆ ಹೊರಟು

ಹೋಗು' ಎಂದು ಹುಚ್ಚಳಂತೆ ನುಡಿದುಬಿಟ್ಟೆ. ಅವನು ದುಃಖದಿಂದ ಹೋಗಿಬಿಟ್ಟ.

'ಅವನಂದು ಹೋದವನು ಮತ್ತೆ ಬರಲೇ ಇಲ್ಲ. ನನ್ನ ವೇದನೆಯ ದುಃಖದಲ್ಲಿ ಮುಳುಗಿ ಇಂದಿಗೆ ಇಪ್ಪತ್ತು ವರುಷಗಳನ್ನು ಏಕಾಕಿನಿಯಾಗಿ ಕಳೆದಿರುವೆನು. ಒಬ್ಬಳೇ, ಜೀವನದ ಕಹಿಯನ್ನು ಮಾತ್ರ ಅನುಭವಿಸಿ ಇಂದು ಈ ಅವಸ್ಥೆಯಲ್ಲಿರುವೆನು. ಇದರ ನೋವಿನ ಆಳವೂ, ಇದರಿಂದ ನನಗಾದ ದುಃಖವೂ ಎಂತಹದೆಂಬುವುದನ್ನು ನೀವೇ ಊಹಿಸಿಕೊಳ್ಳಬೇಕು. ನಾನು ಪ್ರೀತಿಸಿದವನನ್ನಾಗಲಿ, ನನ್ನ ಮುದ್ದು ಮಗನನ್ನಾಗಲಿ ಕಾಣದಲೇ ಸಾಯುವ ಕಾಲವನ್ನೇ ಎದುರುನೋಡುತ್ತ, ಇಷ್ಟುದಿನ ವೇದನೆಯಲ್ಲಿ ಕಳೆದಿರುವೆನು. ಇಂದು ಆ ಸಮಯ ಬಂದಿದೆ, ನನ್ನವರನ್ನು ಕಾಣದೇ ಸಾಯುವ ಕಾಲ ಒದಗಿದೆ

'ನನ್ನ ಪ್ರೀತಿಯ ಗೆಳೆಯನದು ಇದರಲ್ಲಿ ಯಾವ ತಪ್ಪೂ ಇಲ್ಲ ಅವನಿಂದ ಅಂದಿನಿಂದ ದಿನವೂ ತಪ್ಪದಲೇ ಕಾಗದಗಳು ಬಂದಿವೆ ಒಂದು ಸಲವಾದರೂ ನನ್ನನ್ನು ನೋಡಲು ಅನುಮತಿ ಕೊಡಬೇಕೆಂದು ಅವನು ಕೇಳಿಕೊಂಡ ಬೇಡಿಕೊಂಡ ಬೇಡಿಕೆಯನ್ನು ನಿರಾಕರಿಸಿದೆ. ಅವನನ್ನು ಮತ್ತೆ ನೋಡುವ ಸನ್ನಿವೇಶ ನೆನಪಾದಕೂಡಲೇ, ಹಿಂದಿನದೆಲ್ಲವೂ ನೆನಪಿಗೆ ಬಂದು ತಲೆತಿರುಗಿ ಹೋಗುತ್ತಿತ್ತು. ಹುಚ್ಚು ಹಿಡಿಯುವುದೆಂಬ ಭಯ ನನ್ನನ್ನು ವೇದಿಸುತ್ತಿತ್ತು. ನನ್ನ ಮಗನು ಬಂದು ಎಲ್ಲಿ ನನ್ನ ಮಾನವನ್ನು ಬಯಲಿಗೆಳೆದು, ಮುಂದಿಯಲ್ಲಿ ಅವಮಾನಿಸುವನೋ ಎಂಬ ಭಯವು ಈ ಮಿತ್ರನನ್ನು ಸಂದರ್ಶಿಸಲು ಸಮ್ಮತಿ ಕೊಡದಂತೆ ಮಾಡಿತು ಮಗನನ್ನು ಕಾಣದೇ ಇವನನ್ನು ಕಾಣಲು ಯಾವ ಪ್ರಯೋಜನವೆಂಬ ನನ್ನ ಇಚ್ಛೆ ಈ ನಿಶ್ಚಯವನ್ನು ಬದಲಾಯಿಸಲಿಲ್ಲ. ಅಂತೂ ಇಪ್ಪತ್ತು ವರುಷಗಳ ಕಾಲ ಹೇಗ ಕಳೆದನೆಂಬುವುದು ನೆನೆದರೆ ಭಯವಾಗುತ್ತಿದೆ ನನ್ನ ಈ ಯಾತನೆಯನ್ನು ನನ್ನ ಮಗನ ಮುಂದೆ ನೀವು ತಪ್ಪದೇ ಹೇಳುವಿರಲ್ಲವೆ? ಯಾವುದನ್ನೂ ಮರೆಯಾಗಿಸಬೇಡಿ. ನನ್ನ ಈ ಕೊನೆಯ ಸಂದೇಶವನ್ನು ಅವನ ಮುಂದೆ ಸಂಪೂರ್ಣವಾಗಿ ಹೇಳಿಬಿಟ್ಟರೆ ನನಗೆ ಶಾಂತಿ. ಇದೇ ನನ್ನ ಸಂದೇಶ:—

'ಮಗೂ, ನನ್ನ ಮುದ್ದುಮಗೂ, ನಿನಗಾಗಿ ನಾನು. ದೀನರಾದ

ಹೆಂಗಸರ ಬಗ್ಗೆ ಕ್ರೂರನಾಗಿರಬೇಡ. ಅವರ ನಿತ್ಯ ಜೀವನವು ಮೊದಲಿನಿಂದಲೇ ಬಹಳ ವ್ಯಸನ ಮತ್ತು ಕಷ್ಟಯುತವಾಗಿರುತ್ತದೆ ಅಂದಲ್ಲಿ, ಗಂಡಸರು ಹೆಣ್ಣುಮಕ್ಕಳನ್ನು ಕಾಣುವಾಗ ದಯೆಯುಳ್ಳವರಾಗಬೇಕು. ಪ್ರಿಯ ಮಗನೇ, ನೀನು ಕಾಣದಾದಂದಿನಿಂದ, ನಿನ್ನ ಮಮತೆಯ ತಾಯಿ ಯಾವ ಬಗೆಯ ಯಾತನೆಯ ಜೀವನವನ್ನು ಅನುಭವಿಸುತ್ತಿದ್ದಳೆಂಬುವುದನ್ನು ಪರಿಲೋಕಿಸಿ, ಅವಳನ್ನು ಕ್ಷಮಿಸಿ, ಮತ್ತೆ ಹಿಂದಿನಂತೆ ಪ್ರೀತಿಸು. ಈಗ ಅವಳೀಲೋಕದಿಂದ ದೂರ ಹೋಗಿದ್ದರೂ ಅಸೂಯೆಯನ್ನು ತೊರೆದು, ಮಾನವ ಜೀವಿತದಲ್ಲಿ ಹೆಣ್ಣುಮಕ್ಕಳದು ಬಹು ಯಾತನೆಯ ಜೀವನವೆಂದು ತಿಳಿದು, ಈ ಅನಾಥರನ್ನು ಮುಂದೆ ಆದರದಿಂದ ಕಾಣು. ಅದೇ ನನಗೆ ಶಾಂತಿಯನ್ನೀಯುವುದು. ಇಲ್ಲಿಯ ದುಃಖದ, ವೇದನೆಯ ಬದುಕಿನಿಂದ ದೂರ ಸರಿಯುವುದಕ್ಕೆ ನನಗೆ ಬಹಳ ಆನಂದವೆನಿಸುತ್ತದೆ ’ ಈ ನನ್ನ ಸಂದೇಶವನ್ನು ನನ್ನ ಮಗನಿಗೆ ಹೇಳಿಬಿಡಿ!’ ಎಂದು ನುಡಿದಳು.

‘‘ ಈ ರೀತಿ ಮಾತನಾಡುತ್ತಿರುವಾಗ ಅವಳಿಗೆ ಉಬ್ಬಸ ಹೆಚ್ಚಿ ಮಾತುಗಳು ಬಾರದಂತಾದವು ಅವಳ ಧ್ವನಿ ಒಡೆಯಿತು, ಶಬ್ದಗಳು ಅಸ್ಪಷ್ಟವಾದವು ಭಾರದ ಹೃದಯದಿಂದ ಮತ್ತೆ ನನ್ನನ್ನು ಹತ್ತಿರ ಕರೆದು ಕಿವಿಯಲ್ಲಿ ‘ ಅವನಿಗೆ ಇದು ಸ್ಪಷ್ಟ ಹೇಳಿಬಿಡಿ. ಅಂದಿನಿಂದ ಮತ್ತೆ ನಾನು ನನ್ನ ಪ್ರಿಯನನ್ನು ಒಂದು ಸಲವಾದರೂ ಕಾಣಲಿಲ್ಲವೆಂದು,’ ಎಂಬ ಈ ಮಾತುಗಳನ್ನು ಹೇಳಿ ಉಕ್ಕಿಬರುವ ದುಃಖವನ್ನು ತಡೆಯಲಾರದೆ ಮುಖ ಮುಚ್ಚಿಕೊಂಡು, ಮತ್ತೆ ನನ್ನನ್ನುದ್ದೇಶಿಸಿ, ‘ ಮಹನೀಯರೆ, ನನ್ನ ಕೊನೆಯ ಸಂದೇಶ ಮುಗಿಯಿತು ನನ್ನ ಜೀವಿತವು ಮುಗಿಯುವ ನಿಮಿಷಗಳು ಸಮೀಪಿಸಿವೆ, ನನ್ನಿಂದ ದೂರ ಸರಿಯಿರಿ ನೀವು ಬೇರೆ ಕೋಣೆಗೆ ಹೋಗಿಬಿಡಿ ನಾನೊಬ್ಬಳೇ ಶಾಂತಿಯಲ್ಲಿ ಸಾಯುವೆನು ’ ಎಂದು ಹೇಳಿ ಸುಮ್ಮನಾದಳು.

‘‘ ದುಃಖದಿಂದ ಹೊರಗೆ ಬಂದೆ ಆ ಜಮೀಂದಾರಿಣಿಯ ಮರಣದ ನಂತರ ಅವಳ ಕಣ್ಮರೆಯಾಗಿದ್ದ ಮಗನನ್ನು ಗೊತ್ತುಹಚ್ಚಲು, ಅನೇಕ ಪತ್ರಿಕೆಗಳಲ್ಲಿ ಅವಳ ಪರವಾಗಿ ಪ್ರಕಟನೆಗಳನ್ನು ಕೊಟ್ಟೆ. ನನ್ನ ಎಲ್ಲ ಪ್ರಯತ್ನಗಳೂ ನಿಷ್ಫಲವಾದುವು.

(—Mother & Son)

— —

# ಕ್ಷಮಾಗುಣ

ಅವಳು ಜೀವಿಸಿದ್ದುದು ಆ ಕುಟುಂಬದಲ್ಲಿ ಆ ಮನೆತನದವರು ಹೊರಗೆ ಹೋಗಿ ಜನರ ನಡುವೆ ಜೀವಿಸುವುದನ್ನು ಅರಿಯರು. ಹೊರಗಿನ ರಾಜಕೀಯ ವಿಷಯಗಳನ್ನು ಚರ್ಚಿಸುವುದೆಂದರೆ ಮನೆಯಲ್ಲಿ ಊಟದ ಟೇಒಲ್ಲಿನ ಮೇಲೆ ಮಾತ್ರ ಹೆಚ್ಚಿನ ಗೋಜಿಗೆ ಹೋಗದೆ ತಮ್ಮ ಮನೆ ತನದ ಮರ್ಯಾದೆಗೆ ತಕ್ಕಂತೆ ನಡದುಕೊಳ್ಳುವ ಸುಸ್ವಭಾವದ ಮನೆತನ ಅವರದಾಗಿದ್ದಿತು

ಸಮಯ ಬದಲಾಯಿಸಿದಂತೆಲ್ಲ. ಸಮಾಜದ ರೀತಿ–ನೀತಿಗಳು ರೂಪಾಂತರವನ್ನು ಹೊಂದಿದ್ದರೂ ಈ ಮನೆತನದವರು ತಮ್ಮ ಆಚಾರ, ನಡೆ, ನುಡಿ, ವರ್ತನೆಗಳಲ್ಲಿ ಯಾವುದನ್ನೂ ಮಾರ್ಪಡಿಸಲಿಲ್ಲ ಹಿಂದಿನ ಸಂಪ್ರದಾಯದಂತೆ ನಡೆಯುವ ರೂಢಿ ಅವರದು ಹೊರಗಿನ ಯಾವ ತರಹದ ವಿಷಯವಾಗಲಿ, ಇವರ ಹೊಸ್ತಿಲನ್ನು ಸಮೀಪಿಸಿರಲಿಲ್ಲ.

ಯಾವಾಗಲಾದರೊಮ್ಮೆ, ಈ ಮನೆಯ ಯಜಮಾನ, ಅವನ ಪತ್ನಿ, ಸಂಜೆ ಸಮಯಗಳಲ್ಲಿ ಯಾರಿಗೂ ಕೇಳಿಸದಂತೆ ಹೊರಗಿನ ವಿಷಯಗಳನ್ನು ಪಿಸುಮಾತಿನಲ್ಲೇ ಆಡಿ ಮುಗಿಸುತ್ತಿದ್ದರು.

ಒಂದು ದಿನ ಸಂಜೆ ಆತನು "ರಿವ್ಯೋಲಿ ಮನೆಯವರ ವಿಷಯ ನಿನಗೇನಾದರೂ ತಿಳಿದಿದೆಯೇ?" ಎಂದು ತನ್ನ ಹೆಂಡತಿಯನ್ನು ಕೇಳಿದನು.

ಆಕೆ "ಅದು ನಂಬಲಾರದಂಥ ಮಾತು ನನಗೇಕೋ ವಿಪರೀತವೆನಿಸುತ್ತದೆ, ಸ್ವಲ್ಪ ಭಯವೆನಿಸುತ್ತದೆ" ಎಂದಳು.

ಮನೆಯ ಹಿರಿಯರು ಎಷ್ಟು ದಕ್ಷತೆಯಿಂದ ವರ್ತಿಸಿದಾಗ್ಯೂ ಈಗಿನ ವಾತಾವರಣದಲ್ಲಿ ಕಿರಿಯರು ತಮ್ಮ ಮೂಢತನದಲ್ಲಿಯೇ ತಪ್ಪುಹಾದಿ ಹಿಡಿಯುವುದುಂಟು ಅವರ ಅಜ್ಞಾನವೇ ಕೆಲವೊಂದು ಅನಿವಾರ್ಯ ವೇಳೆಗಳಲ್ಲಿ ತಪ್ಪು ಮಾಡಲು ಪ್ರೇರೇಪಿಸುವುದು, ನೆನೆದಂತೆ ಮಾಡಲು ಅಶಕ್ಯರಾಗುವರು. ಬಿಡಿದಂತೆ ನಡೆದುಕೊಳ್ಳಲು ಅಸಮರ್ಥರಾಗುವರು ಒಳ್ಳೆಯದೆಂದು ನೆನೆದು ಮಾಡಿದ ಕಾರ್ಯ ಕೊನೆಯಲ್ಲಿ ಕೆಡುವುದೂ ಉಂಟು. ನಿಸ್ವಾರ್ಥದಿಂದ

ಮಾಡಿದ ಕಾರ್ಯಕ್ಕೆ ಅಪವಾದ ಬರುವುದು, ಉಪಕಾರವಾಗಲೆಂದು ಬಯಸಿ ಮಾಡಿದುದು ಕೆಡುಕಾಗಿ ಪರಿಣಮಿಸುವುದು ಸಹಜವೆ.

ಕೆಲವರು ಈ ಅಜ್ಞಾನಕೂಪದಲ್ಲಿ ಕೊನೆಯವರೆಗೂ ಉಳಿಯುವರು. ಅವರ ನಂಬುಗೆ, ಹಳೆಯ ಆಚಾರ-ವಿಚಾರಗಳಲ್ಲಿಯ ಶ್ರದ್ಧೆ, ಮನೆತನದ ಹಿರಿಮೆಯಲ್ಲಿರುವ ಅಭಿಮಾನ, ಸರ್ವದಾ ಬದಲಾಗುವುದಿಲ್ಲ ಹೀಗಾಗುವುದರಿಂದ ಎಲ್ಲವೂ ದೈವಪ್ರೇರಿತವೆಂದು ಕೈಜೋಡಿಸಿಕೊಂಡು ಕುಳಿತು ಬಿಡುವರು ಎಂತಹ ಪ್ರಮಾದ ಸಂಭವಿಸಿದರೂ ಅವರಿಗೆ ಜ್ಞಾನೋದಯವಾಗುವುದಿಲ್ಲ ಈ ಬಗೆಯ ಜನರು ಮೋಸದಲ್ಲಿರುವ ಕೆಟ್ಟ ಜನರ ಕುಹಕ ಜಾಲದಲ್ಲಿ ಬಿದ್ದು ನರಳುವರು ದೈವವನ್ನು ಸುಮ್ಮನೆ ದೂರುವರು ಇದು ಈಗಿನ ಕಿರಿಯರ ಪರಿಸ್ಥಿತಿ

ಸಾವಿಗ್ನೋ ಮನೆತನದವರು ವಯಸ್ಸಾದ ತಮ್ಮ ಮಗಳ ಮದುವೆಯನ್ನೇರ್ಪಡಿಸಿದರು. ಆಕೆಯ ವಯಸ್ಸು ಹದಿನೆಂಟು ಹೆಸರು ಬರ್ತಾ, ಹಣದ ಶಾಖೆಯಲ್ಲಿ ಕೆಲಸಕ್ಕಿದ್ದ ಜಾರ್ಜ್ ಬಾರ್ಟನ್ ಎಂಬ ಯುವಕನನ್ನು ಅವಳು ಮದುವೆಯಾದಳು ಪ್ಯಾರಿಸ್ ನಗರದಲ್ಲಿ ಮನೆ ಮಾಡಿಕೊಂಡ ಈ ಸುಂದರ ಯುವಕನು ಬಹು ಚುರುಕು ಮಾತಿನವನು. ಮಾವನವರ ಮನೆತನದ ಬಗ್ಗೆ ಯಾವ ಬಗೆಯ ಅಸಹ್ಯ ಹೊರಗೆ ತೋರಗೊಡದಿದ್ದರೂ, ಒಳಗೆ ಮಾತ್ರ ಅವರ ರೀತಿ, ವಿಚಿತ್ರ ಸಂಪ್ರದಾಯವಂತಿಕೆಯ ವರ್ತನೆಯನ್ನು ತನ್ನ ಮಿತ್ರರೆದುರು ಟೀಕಿಸುತ್ತಿದ್ದನು. ಸವಿಮಾತುಗಳಿಂದ ಹೆಂಡತಿಯ ಮನೆಯವರನ್ನು ಮರುಳುಗೊಳಿಸಿದ್ದನು ಇವನ ಮಾತಿನಲ್ಲಿ ಅವರಿಗೆ ಹೆಚ್ಚು ವಿಶ್ವಾಸ.

ಅವನೂ ಆಗರ್ಭ ಶ್ರೀಮಂತ ಮದುವೆಯಾದನಂತರ ಹೆಂಡತಿಯನ್ನು ಪ್ಯಾರಿಸ್ ನಗರಕ್ಕೆ ಕರೆದೊಯ್ದನು. ಸರಿಜೋಡಾದ ಇವರ ಮಿಲನ ಎಲ್ಲರಿಗೂ ಆನಂದವನ್ನುಂಟು ಮಾಡಿತು.

ವಿಶಾಲವಾದ ಪ್ಯಾರಿಸ್ ನಗರಕ್ಕೆ ಹೋದನಂತರ, ಹಳ್ಳಿಯವರಂತೆ ಅವಳು ಮನೆಯಲ್ಲಿಯೇ ಉಳಿದಳು ಈ ನಗರದ ಬೆಡಗು, ಬಿನ್ನಾಣ, ಮೋಸ, ತಂಟೆ, ತರಲೆಯ ಜೀವನ ಅವಳಿಗೆ ಹೊಸದು. ಜನರು ಇವಳನ್ನು ಹಳ್ಳಿಯವಳೆಂದು ಹಾಸ್ಯ ಮಾಡಿದರೂ, ಅದರಲ್ಲಿ ಮಾತ್ಸರ್ಯವಿಲ್ಲವೆಂದು

ಬಗೆದು ಸುಮ್ಮನಿರುತ್ತಿದ್ದಳು. ಮನೆಯಲ್ಲಿಯೇ ಯಾವಾಗಲೂ ಇದ್ದ ಇವಳಿಗೆ ತಾನಾವ ಬೀದಿಯಲ್ಲಿರುವೆನೆಂಬುದೂ ತಿಳಿಯದ ಮಾತು. ಪಕ್ಕದ ಬೀದಿಗೆ ಹೋಗಿಬಂದರೆ ಎಷ್ಟೋ ದೂರ ದಾರಿ ನಡೆದಂತೆನಿಸುತ್ತಿತ್ತು.

ವರುಷದಲ್ಲಿ, ಅದೂ ಹಿರಿಯ ಹಬ್ಬದ ದಿನಗಳಲ್ಲಿ, ಗಂಡನು ಅವಳನ್ನು ನಾಲ್ಕಾರು ಸಲ ನಾಟಕಗೃಹಗಳಿಗೆ ಕರೆದುಕೊಂಡು ಹೋಗುತ್ತಿದ್ದ. ನಾಟಕ ನೋಡಿದ ನಾಲ್ಕಾರು ತಿಂಗಳ ನಂತರ ಒಂದು ದಿನ ಊಟದ ಸಮಯದಲ್ಲಿ ಯಾವನೋ ಒಬ್ಬ ನಟನ ಬಗ್ಗೆ ಮಾತನಾಡುತ್ತಿದ್ದಳು ಆ ಊರಲ್ಲೆಲ್ಲ ಅವಳಿಗೆ ಪರಿಚಯವಿದ್ದ ಮನೆತನದವರೆಂದರೆ 'ಮಾರ್ಟಿನೆಟ' ಮತ್ತು 'ಮಿಚಿಲಿನ್'.

ಹೀಗೆ ಮುಗ್ಧೆಯಾದ ಹೆಂಡತಿಯು ಮನೆಯಲ್ಲಿರಲು, ಬಾರ್ಟನ್ನನು ತನಗೆ ತೋರಿದ ಸಮಯದಲ್ಲಿ ಮನೆಗೆ ಬರುತ್ತಿದ್ದ ನಿಯಮವೇ ಇರಲಿಲ್ಲ ಅವನ ಜೀವನದ ಕ್ರಮದಲ್ಲಿ ಆದರೂ ನಯವಾದ ಅವನ ನುಡಿಗಳಿಗೆ ಬೆರಗಾಗಿ, ಯಾವ ಬಗೆಯ ಮೋಸವಿಲ್ಲೆಂದು ಅವನ ಹೆಂಡತಿ ಭಾವಿಸಿದ್ದಳು. ನಿಷ್ಕಳಂಕಜೀವಿಯಾದ ಅವಳಿಗೆ ಯಾವ ಸಂಶಯವೂ ಕಂಡುಬರಲಿಲ್ಲ

ಹೀಗಿರಲು ಒಂದು ದಿನ ಇವಳಿಗೆ ಎಲ್ಲಿಂದಲೋ ಯಾರಿಂದಲೋ ಒಂದು ಕಾಗದ ಬಂತು. ಅದರಲ್ಲಿ ಓರ್ವ ಅಪರಿಚಿತನು ತನ್ನ ಸುಗುಣ ಗಳನ್ನು ವರ್ಣಿಸಿ, ಮುಗ್ಧ ಜೀವನಕ್ಕೆ ಮರುಕಗೊಂಡು, ಮೋಸದ ಮುಸು ಕನ್ನು ಹೊರಗೆಡಹಿ, ಪ್ರೀತಿಯ ನೈರ್ಮಲ್ಯತೆಯನ್ನು ಕಾಯುವದೇ ತನ್ನ ಧ್ಯೇಯವೆಂದು ಸೂಚಿಸಿದ್ದ ಮತ್ತು ಅವಳನ್ನು ಪ್ರೀತಿಸುತ್ತಿರುವೆನೆಂದು ಬರೆದಿದ್ದ. ಇದಲ್ಲದೆ ಆಕೆಯ ಗಂಡನು ಎರಡು ವರುಷಗಳಿಂದ ಬೇರೊಬ್ಬಳ ಜತೆಯಲ್ಲಿ ರಾತ್ರಿಗಳನ್ನೆಲ್ಲ ಕಳೆಯುತ್ತಿದ್ದನೆಂದು ಬರೆದದ್ದಲ್ಲದೆ ಆಕೆಯ ಹೆಸರನ್ನು ಸಹ ಬರೆದಿದ್ದ.

ಈ ಬಗೆಯ ಸಂಕಟ ಅವಳಿಗೆ ತೀರ ಹೊಸದು. ಮನದಲ್ಲಿಯೇ ದುಃಖಿಸಿದಳು. ಗಂಡನು ಬಂದೊಡನೆ ಆ ಕಾಗದವನ್ನು ಅವನ ಮುಂದೆಸೆದು ಅಳುತ್ತ ತನ್ನ ಕೋಣೆಗೆ ಹೋದಳು. ಯುಕ್ತಿಯಿಂದ ಅವನ ಮೋಸ ವರ್ತನೆಯನ್ನು ಕಂಡು ಹಿಡಿಯುವ ಜಾಣತನವಾಗಲಿ, ಸಾಹಸವಾಗಲಿ ಅವಳಲ್ಲಿರಲಿಲ್ಲ.

ಬಾರ್ಟನ್ನನು ಬಹು ಜಾಣ. ಪಂಜರದ ಅರಗಿಳಿಯನ್ನು ಸಂತೈಸುವುದ ರಲ್ಲಿ ನುರಿತವ ಇಂತಹ ಅನೇಕ ಪ್ರಸಂಗಗಳನ್ನೆ ಮುರಿಸುವ ಯುಕ್ತಿ ಇವನಿಗೆ ತಿಳಿದಿತ್ತು ಎಲ್ಲವನ್ನೂ ಸಜ್ಜುಗೊಳಿಸಿಕೊಂಡು ಸ್ವಲ್ಪ ತಡೆದು ಅವಳ ಕೋಣೆಯ ಬಾಗಿಲಿಗೆ ಬಂದು ಮೆಲ್ಲನೆ ತಟ್ಟಿದ ಬರ್ತಾ ಬಾಗಿಲು ತೆರೆದು ಅವನ ಕಡೆ ನೋಡದೇ ಹಾಸಿಗೆಯಲ್ಲಿ ಮಲಗಿದಳು ಅವನೂ ಅವಳ ಬಳಿಯಲ್ಲಿ ಕುಳಿತು ಗಲ್ಲವನ್ನು ಹಿಡಿದು, ಪ್ರೀತಿಯ ವಚನಗಳಿಂದ ಸಂತೈಸಿ, ಹುಸಿ ನಗುವಿನಿಂದ ಹೀಗೆ ಸಮಾಧಾನ ಹೇಳಿದ

"ಇಲ್ಲಿ ನೋಡು ರೋಸೆಟಳು ನನ್ನ ಹಳೆಯ ಮಿತ್ರಳು ಹತ್ತು ವರುಷದಿಂದ ನಾನವಳನ್ನು ಬಲ್ಲ, ನನಗವಳಲ್ಲಿ ಹೆಚ್ಚು ವಿಶ್ವಾಸ, ಸ್ನೇಹ ಬೆಳೆದುಕೊಂಡು ಬಂದಿದ ಇದೇ ಬಗೆಯ ಹಲವು ಮನೆತನಗಳ ಪರಿಚಯ ನನಗುಂಟು. ನಿನಗಾವುದರಲ್ಲಿಯೂ ಆಸಕ್ತಿ ಇಲ್ಲವೆಂದು ನಾನು ಅವರ ಹೆಚ್ಚಿನ ಪರಿಚಯ ಮಾಡಿಕೊಡಲಿಲ್ಲ. ಹೊರಗಿನವರೊಂದಿಗೆ ಸ್ನೇಹ ಬೆಳೆಸು ವುದೆಂದರೆ ನಿನಗ ಬೇಡಾದ ವಿಷಯ ನಾನೇನು ಮಾಡಲಿ? ಬೇಕಾದರೆ ನೀನು ಈಗಿಂದೀಗಲೇ ಅಲಂಕಾರ ಮಾಡಿಕೊಂಡು ಬರುವುದಾದರೆ ರೋಸೆಟಳ ಮನೆಗೆ ಕರೆದುಕೊಂಡು ಹೋಗುತ್ತೇನೆ. ಸಮುಕ್ಷಮ ಅವಳನ್ನು ಕಂಡು ಮಾತನಾಡಿದರೆ ಅವಳೆಂತಹ ಒಳ್ಳೆಯವಳೆಂಬುದು ತಿಳಿಯುವುದು ನಾನು ವರ್ಣಿಸಿದರ ನೀನು ಬೇರೆ ತಿಳಿಯುವೆ" ಎಂದು ಹೇಳಿದ ಅವನ ಮಾತುಗಳನ್ನು ನಂಬಿದಳು ರೋಸೆಟಳ ಮನೆಗೆ ಹೋಗುವುದೆಂದು ನಿಶ್ಚಯ ವಾಯಿತು ಮನೆಯಲ್ಲಿಯೇ ಇದ್ದು ಬೇಸರ ಹೊಂದಿದ ಇವಳಿಗೆ ಹೊರಗೆ ಹರಿದಾಡುವುದು ಒಳಿತೆಂದನಿಸಿತು

ರೋಸೆಟಳ ಬಿಡಾರ ದೊಡ್ಡ ಮನೆಯೊಂದರ ನಾಲ್ಕನೇ ಅಂತಸ್ತಿನ ಲ್ಲಿತ್ತು. ಅವಳ ಮನೆ ಚಿಕ್ಕದಾಗಿದ್ದರೂ ಚೊಕ್ಕಟವಾಗಿದ್ದಿತು ಶೃಂಗಾರ ವಸ್ತುಗಳಿಂದ ಅಲಂಕರಿಸಲ್ಪಟ್ಟಿತ್ತು ಕೂತು ಮಾತಾಡುವ ಕೋಣೆಯಲ್ಲಿ, ಹೊರಗೆ ನಾಕಷ್ಟು ಬೆಳಕಿದ್ದರೂ ಸ್ವಲ್ಪ ಕತ್ತಲಾಗಿತ್ತು ರೋಸೆಟಳು ಇವರನ್ನು ನಗುವಿನಿಂದ ಸ್ವಾಗತಿಸುತ್ತ ಒಳಗೆ ಬಂದಳು ಬಹಳ ಎತ್ತರ ದವಳಲ್ಲದಿದ್ದರೂ, ಅವಳ ಕಪ್ಪು ವರ್ಣ ನೋಡುವುದಕ್ಕೆ ಅಸಹ್ಯವೆನಿಸು ತ್ತಿತ್ತು ಬಾರ್ಟನ್ನನು ತನ್ನ ಹೆಂಡತಿಯ ಪರಿಚಯ ಮಾಡಿಕೊಟ್ಟನು ಈ

ದಂಪತಿಗಳ ಅನೀರಿಕ್ಷಿತ ಆಗಮನದಿಂದ ಬೆರಗುಗೊಂಡಳೆಂದೆನಿಸುತ್ತಿತ್ತು ಅವಳ ಕಣ್ಣಿನ ಸರಣಿ.

"ನಿಮ್ಮ ಪರಿಚಯವಾಗುವುದೆಂದು ಅನೇಕ ದಿನಗಳಿಂದ ಬಯಸಿದ್ದೆ" ಎಂದು ನಗುವಿನಿಂದ ಹೇಳುತ್ತ ಎರಡೂ ಕೈಗಳಿಂದ ಅವನ ಹೆಂಡತಿಯನ್ನಪ್ಪಿದಳು. ಅನಮಂತ್ರಿತ ರೀತಿಯಲ್ಲಿ ತನ್ನ ಬಡ ಕುಟೀರಕ್ಕೆ ಬಂದದು ಬಹಳ ಸಂತೋಷವೆಂತಲೂ, ಈ ಬಗೆಯ ಸಮಾಗಮನ ದಿನವನ್ನು ಬಹಳ ದಿನಗಳಿಂದಲೂ ಕಾದಿದ್ದಳೆಂದೂ ಉತ್ಸುಕತೆಯಿಂದ ಹೇಳಿದಳು. ಭ್ರಾತೃ ವಾತ್ಸಲ್ಯದಿಂದ ಬೆಳೆದು ಬಂದ ಬಾರ್ಟನ್ನನ ಸ್ನೇಹ ಮರೆಯಲಾಗದೆಂದು ಹೇಳಿದಳು.

ದಿನೇದಿನೇ ಇವರ ಸ್ನೇಹ ಬೆಳೆಯಿತು. ಒಂದರಗಳಿಗೆಯೂ ಬಿಟ್ಟಿರುತ್ತಿರಲಿಲ್ಲ ಊಟ, ಮಾತು-ಕತೆ, ನಿದ್ರೆ ಸಹ ಒಂದೇ ಕಡೆ ಆಗುತ್ತಿತ್ತು. ಬಾರ್ಟನ್ನನು ಈಗ ಹೊರಗೆ ಕೆಲಸವಿದೆಯೆಂದು ಮನೆಗೆ ತಡಮಾಡಿ ಬರುತ್ತಿರಲಿಲ್ಲ ಇಬ್ಬರ ಸ್ನೇಹ ಬೆಳೆಯಿತು. ಇವಳಿಗಾಗಿ ಮನೆಯಲ್ಲಿ ಪ್ರತ್ಯೇಕ ಕೋಣೆಯನ್ನು ಕಾದಿಡಲಾಯಿತು

ಈ ಬಗೆಯಾಗಿ ಎರಡು ವರುಷಗಳು ಕಳೆದವು. ಈ ಸಮಯದಲ್ಲಿ ಇಬ್ಬರ ನಡುವೆ ಅತ್ಯಂತ ಮಮತೆಯ, ವಾತ್ಸಲ್ಯದ, ಗಾಢವಾದ ಗೆಳೆತನ ಬೆಳೆಯಿತು. ಇಬ್ಬರೂ ಬಹು ಸಂತೋಷದಿಂದ ಕಾಲ ಕಳೆದರು ಈ ಹತ್ತಿರದ ಜೀವನದಲ್ಲಿ ಬಾರ್ಟನ್ನನ ಹೆಂಡತಿಯಾದ ಬರ್ತಾಳಿಗೆ ಬಹಳ ಆನಂದವೆನಿಸಿತು.

ಒಂದು ದಿನ ರೋಸೆಟಳಿಗೆ ಜ್ವರ ಬಂದು, ರಾತ್ರಿ ಬಹಳವಾಗಿ ವೇದನೆಪಟ್ಟಳು. ಈ ದಂಪತಿಗಳು ಅದಳ ಆರೈಕೆಯಲ್ಲಿ ಹೆಚ್ಚು ಆಸಕ್ತಿವಹಿಸಿ ಶುಶ್ರೂಷೆ ಮಾಡಿದರು. ಒಂದು ದಿನ ಡಾಕ್ಟರನು ಬಂದು ರೋಗವನ್ನು ಪರೀಕ್ಷಿಸಿ ಹೋಗುವ ಸಮಯದಲ್ಲಿ ರೋಸೆಟಳ ಬೇನೆ ಬಲಿತಿದೆಯೆಂದೂ ಅವಳು ಬದುಕುವುದು ಕಷ್ಟವೆಂದೂ ಹೇಳಿ ಹೋದನು ಈ ವಿಷಯ ಅವರನ್ನು ಅಧೈರ್ಯಗೊಳಿಸಿತು. ಈ ಬಗೆಯ ವಿಪತ್ತು ಸಂಭವಿಸಿದುದಕ್ಕೆ ಇಬ್ಬರೂ ದುಃಖಿಸಿದರು.

ಅಂದು ಇರುಳೆಲ್ಲವೂ ಇಬ್ಬರೂ ಹಾಸಿಗೆಯ ಹತ್ತಿರ ರೋಗಿಯನ್ನು ಕಾದಿದ್ದರು. ಹೆಚ್ಚಿನ ಪ್ರೀತಿಯಿಂದ ಬರ್ತಳು ರೋಗಿಯನ್ನಪ್ಪಿಕೊಂಡು

ಅಳುವುದನ್ನು ಕಂಡು ಬಾರ್ಟನ್ನನೂ ಇವಳಿಗೆ ತಿಳಿಯದಂತೆ ಕಣ್ಣೀರಿಟ್ಟನು. ಮೂರನೆಯ ದಿನ ಅವಳ ಸ್ಥಿತಿ ಭೀಕರವಾಯಿತು. ಆದರೆ ಸಂಜೆಯ ಹೊತ್ತಿಗೆ ಅವಳಿಗೆ ಸ್ವಲ್ಪ ಗುಣವೆನಿಸಲು ರಾತ್ರಿ ಊಟಕ್ಕೆ ಕೋಣೆಗೆ ಎಲ್ಲರನ್ನೂ ಹೋಗಿರೆಂದು ಒತ್ತಾಯ ಪಡಿಸಿದಳು

ಊಟದ ಕೋಣೆಗೆ ಆ ದಂಪತಿಗಳು ಬಂದು ದುಃಖದಲ್ಲಿರುವಾಗ ಓರ್ವ ದಾದಿ ಬಾರ್ಟನ್ನನಿಗೊಂದು ಪತ್ರ ತಂದುಕೊಟ್ಟಳು. ಅದನ್ನೋದಿ ಬಾರ್ಟನನು ಭಯಗೊಂಡ. ರೋಸೆಟಳ ಕೋಣೆಗೆ ತಾನಿಲ್ಲದಾಗ ಒಬ್ಬಳೇ ಹೋಗಬೇಡವೆಂದು ಹೆಂಡತಿಗೆ ಹೇಳಿ ಹೊರಗೆ ಹೋದ

ಗಂಡನು ಕೋಣೆಯ ಹೊರಗೆ ಹೋದನಂತರ ತನ್ನ ಸ್ನೇಹಿತಳಾದ ರೋಸೆಟಳನ್ನು ನೋಡಬೇಕೆಂದು ಅನೇಕ ಸಲ ಬರ್ತಾ ನೆನೆದರೂ ಗಂಡನ ಆಜ್ಞೆಯನ್ನು ಮೀರುವ ಮನಸ್ಸಾಗಲಿಲ್ಲ ಬಹಳ ಹೊತ್ತು ಕಾದರೂ ಬಾರ್ಟನ್ನನು ಬಾರದಿರುವುದನ್ನು ಕಂಡು ವ್ಯಥೆಗೊಂಡಳು. ಹೊರಗೆ ಹೋಗುವೆನೆಂದು ಹೇಳಿ, ತನ್ನ ಕೋಣೆಯೊಳಗೆ ಹೋದ ಅವನ ಬಗ್ಗೆ ಹೆಚ್ಚಿನ ವಿವರಗಳೇನಾದರೂ ತಿಳಿಯಬಹುದೆಂದು ಭಾವಿಸಿ, ಅವನ ಕೋಣೆಯನ್ನು ಪ್ರವೇಶಿಸಿದಳು ಟೇಬಲ್ಲಿನ ಮೇಲೆ ಕೈಚೀಲ ಬಿದ್ದಿರುವುದನ್ನೂ ಅವುಗಳ ಹತ್ತಿರ ಮಡಿಚಿದ ಒಂದು ಕಾಗದದ ತುಂಡನ್ನೂ ಕಂಡು, ಅದೇನೆಂದು ಬಿಚ್ಚಿನೋಡಿದಳು. ಬಾರ್ಟನ್ನನಿಗೆ ಬಂದ ಕಾಗದವದು. ಅದನ್ನು ಓದುವುದೇ ಬೇಡವೆಂದು ತರ್ಕಿಸಿದಳು. ಹೆಚ್ಚಿನ ಆತುರದಿಂದ ಮತ್ತೆ ನೋಡಿದಳು ಅದು ರೋಸೆಟಳು ಬರೆದ ಕಾಗದವೆಂದು ಹಸ್ತಾಕ್ಷರಗಳಿಂದ ತಿಳಿದುಬಂತು. ಅದರ ವಿವರ ಹೀಗಿತ್ತು—

"ಪ್ರಿಯ ಬಾರ್ಟನ್, ನೀನೊಬ್ಬನೇ ಬಂದು, ನಾನು ಸಾಯುವ ಮುನ್ನ ನನಗೆ ಒಂದು ಪ್ರೇಮದ ಆಲಿಂಗನವನ್ನು ಕೊಡು ನನ್ನ ಜೀವನದ ಕೊನೆಯ ಈ ಕೋರಿಕೆ ತೀರಿಸು—ನಿನ್ನವಳು ರೋಸೆಟ."

ಇದನ್ನು ನೋಡಿ ಚಕಿತಳಾದಳು. ಅದರಲ್ಲಿಯ ವಿವರಗಳನ್ನು ನಂಬಲಾರದಾದಳು. ಇವರಿಬ್ಬರೂ ಕೂಡಿ ತನ್ನಲ್ಲಿ ತೋರಿದ ಅವಿಶ್ವಾಸ, ತೋರಿಕೆಯ ಪ್ರೀತಿ, ಮಾಡಿದ ಮೋಸ, ತನ್ನ ಮುಗ್ಧತೆಯ ಜೀವನಕ್ಕೆ ಮಾಡಿದ ವಂಚನೆ-ಜೀವನದಲ್ಲಿ ಇವರಿಬ್ಬರ ನಡುವೆ ನಡೆದ ಅನೇಕ ಮರ್ಮದಾಯಕ

ಸನ್ನಿವೇಶಗಳ ನೆನಪು ಮಾಡಿಕೊಂಡು, ಅದರ ನಿಜಾರ್ಥವೇನೆಂಬುದನ್ನು ಈಗ ತಿಳಿದಳು ಆ ಸಮಯದಲ್ಲಿ ಅವುಗಳಿಗೆ ಹೆಚ್ಚು ಮಹತ್ವವಿರದಿದ್ದರೂ, ಈಗ ಅವರ ಗುಪ್ತ ಪ್ರೇಮ ವ್ಯವಹಾರ ಬಯಲಾದನಂತರ ಎಲ್ಲವೂ ವಿವರವಾಯಿತು

ನಿರಾಶೆಯಿಂದ ಅವಳು ರೇಗಿದಳು ಅಸೂಯೆಯು ಜ್ವಾಲೆಯು ಹೃದಯದಲ್ಲಿ ಧಗಧಗಿಸಿತು ಮುಂದೇನೆಂಬ ವಿಚಾರ ಅವಳ ತಲೆ ಕೆಡಿಸಿತು ಇಂತಹ ಮೋಸಕ್ಕೆ ಪ್ರತೀಕಾರವೇನೆಂದು ಯೋಚಿಸಲು ಅವಳಿಗೆ ಸಮಾಧಾನವೇ ಇರಲಿಲ್ಲ ಉದ್ವೇಗದಿಂದ ಅವಳ ತಲೆ ಕಾದುಹೋಗಿತ್ತು

ಅವನು ಬರುತ್ತಿರುವ ಕಾಲಿನ ಸಪ್ಪಳ ಕೇಳಿಸಿತು ತನ್ನ ಕೋಣೆಗೆ ಹೋಗಿ ಬಾಗಿಲವನ್ನು ಮುಚ್ಚಿ ಮಲಗಿದಳು. ಆವನು ಬಂದವನೇ ಬಾಗಿಲನ್ನು ತಟ್ಟುತ್ತ, "ರೋಸೆಟಳು ಸಾಯುತ್ತಿರುವಳು – ಬಾಗಿಲು ತೆಗೆ, ಅವಳಲ್ಲಿಗೆ ಹೊಗುವ" ಎಂದು ಉದ್ವೇಗದಿಂದ ನುಡಿಯುವ ಅವನ ಮಾತುಗಳನ್ನು ಕೇಳಿ ಬಾಗಿಲನ್ನು, ಮೆಲ್ಲನೆ ತೆಗೆದು "ನೀನೊಬ್ಬನೇ ಹೋಗಬಹುದು ನನ್ನ ಅವಶ್ಯಕತೆ ಅವಳಿಗಿಲ್ಲ ನನ್ನ ಬರುವಿಕೆ ಅವಳಿಗೆ ಬೇಕಾಗಿಲ್ಲ" ಎಂದು ಕೋಪದಿಂದ ಅಡಿದ ಅವಳ ಮಾತಿನ ಕಡೆ ಲಕ್ಷ್ಯವಿಡದೆ, "ತ್ವರೆಮಾಡು ತ್ವರೆಮಾಡು. ಅವಳು ಸಾಯುತ್ತಿರುವಳು" ಎಂದು ಹೇಳಿದ

"ಈಗ ಆ ಸಾವು ನನಗೆ ಬಂದಿದ್ದರೆ ನಿನ್ನ ಮನಸ್ಸಿಗೆ ಸಂತೋಷವಾಗುತ್ತಿತ್ತಲ್ಲವೆ ?" ಎಂದು ರೋಷದಿಂದ ಮಾರುತ್ತರವಿತ್ತಳು

ಇದರರ್ಥವನ್ನು ಗ್ರಹಿಸಿ, ಸುಮ್ಮನೇ ಮಾತಿಂದ ಕಾಲಹರಣ ಮಾಡುವುದುಚಿತವಲ್ಲವೆಂದು ಭಾವಿಸಿ, ಮೇಲೆ ಮಲಗಿದ ರೋಗಿಯ ಕೋಣೆಗೆ ಹೋದ ರೋಸೆಟಳನ್ನು ಇವರ ಮನೆಯ ಮೇಲಟ್ಟದಲ್ಲಿಯೇ ಪ್ರತ್ಯೇಕ ಕೋಣೆಯಲ್ಲಿ ಮಲಗಿಸಿದ್ದರು. ರೋಸೆಟಳು ಶಾಂತರೀತಿಯಲ್ಲಿ ಸಾವನ್ನಪ್ಪಿದಳು. ಇವಳ ಅಗಲುವಿಕೆಯಿಂದ ತನಗುಂಟಾದ ಏಕಾಂತವಾಸಕ್ಕೆ ಬಹುವಾಗಿ ರೋಧಿಸಿದ ಪ್ರೀತಿಸಿದ ಮಿತ್ರಳ ಸಾವಿನ ನೋವು, ಬದುಕಿದ್ದ ಹೆಂಡತಿಯು ತೋರುತ್ತಲಿದ್ದ ಅಸೂಯೆ, ರೋಷ, ಇವನ ಜೀವನವನ್ನು ದುಃಖಮಯವನ್ನಾಗಿಮಾಡಿತು ಯಂತ್ರದಂತೆ ಇವರ ನಿತ್ಯಜೀವನ ಸಾಗಿದ್ದಿತೇ ಹೊರತು, ಒಂದು ವರುಷದವರೆಗೆ ಇವರಿಬ್ಬರ ನಡುವೆ ಮಾತುಕತೆಗಳೇ

ಆಗಲಿಲ್ಲ. ಹೀಗೆ ಕಾಲ ತಳ್ಳುವುದು ಇಬ್ಬರಿಗೂ ಕಷ್ಟವೆನಿಸಿತು. ಒಂದೇ ಟೇಬಲ್ಲಿನ ಮೇಲೆ ಊಟ ಮಾಡಿದರೂ ಅಪರಿಚಿತರಂತೆ, ಮೂಕರಂತೆ ಕಳೆದ ಇವರ ಜೀವನದಲ್ಲಿ ಸುಖವಿರಲಿಲ್ಲ

ಅಂದು ಮುಂಜಾನೆ ಬರ್ತಾಳು ಬಹು ಸುಂದರವಾದ ಗುಲಾಬಿಯ ತುರಾಯಿಯನ್ನು ಪೇಟೆಯಿಂದ ತಂದುದು ಆಶ್ಚರ್ಯವೆನಿಸಿತು ಹಿಂದೆ ಒಂದು ವರುಷದಿಂದಲೂ ಅವಳ ಮುಖದಲ್ಲಿ ಕಾಣದ ವಿಕಾಸವನ್ನು ಅಂದಿನ ಬೆಳಗಿನಲ್ಲಿ ಕಂಡನು. ಬಿಳಿಯ ಗುಲಾಬಿಯ ಆ ದೊಡ್ಡ ತುರಾಯಿಯನ್ನು ನೋಡಿ, ಬಹು ದಿನದಿಂದಲೂ ನೊಂದ ಅವನ ಹೃದಯವೂ ವಿಕಾಸ ಗೊಂಡಿತು ಪೇಟೆಯಿಂದ ಆ ತುರಾಯಿಯನ್ನು ತಂದು ಟೇಬಲ್ಲಿನ ಮೇಲಿರಿಸಿ, ಬರ್ತಾಳು ಅವನ ಹತ್ತಿರ ಬಂದು—

"ಈ ತುರಾಯಿ ಬಹು ಭಾರವಾಗಿದೆ ಇದರೊಂದಿಗೆ ಸ್ವಲ್ಪ ಹೊರಗೆ ಬರುವಿಯಾ?" ಎಂದು ಹೇಳಿದ ಮಾತುಗಳಿಗೆ ಮೂಕನಾಗಿ ತುರಾಯಿಯೊಂದಿಗೆ ಅವಳನ್ನು ಹಿಂಬಾಲಿಸಿ, ಹೊರಗೆ ಅವರಿಗಾಗಿ ಕಾದಿದ್ದ ಗಾಡಿಯಲ್ಲಿ ಮುಂದೆ ಸಾಗಿದಾಗ, ಬರ್ತಾಳು ಅವನ ಕಡೆ ಕಣ್ಣೀರಿನಿಂದ ತುಂಬಿದ ನೋಟದಿಂದ ನೋಡಿ, "ರೋಸೆಟಳ ಗೋರಿಯ ಹತ್ತಿರ ಹೋಗುವ. ನನ್ನನ್ನಲ್ಲಿಗೆ ಕರೆದುಕೊಂಡು ಹೋಗಿ" ಎಂದು ಅಳುತ್ತ ಹೇಳಿದಳು

ಬಾರ್ಟನ್ನನಿಗೆ ಏನೂ ತೋಚದಂತಾಯಿತು ಮೌನದಿಂದ ಸ್ಮಶಾನದಲ್ಲಿಯ ಒಂದೆಡೆ ಬಿಳಿಯ ಒಂದು ಗೋರಿಯ ಹಾಸುಗಲ್ಲಿನ ಹತ್ತಿರ ನಿಂತರು ಅವಳು ಶಾಂತಚಿತ್ತದಿಂದ ಅವನ ಕೈಯಲ್ಲಿದ್ದ ಗುಲಾಬಿಯ ತುರಾಯಿಯನ್ನು ತೆಗೆದುಕೊಂಡು, ಕಾಲೂರಿ ಕೂತು, ದುಃಖಪೂರಿತ ಕಣ್ಣುಗಳಿಂದ ಪ್ರಾರ್ಥನೆಯೊಂದಿಗೆ ಆ ಬಿಳಿ ಕಲ್ಲಿನಮೇಲೆ ಅದನ್ನಿರಿಸಿದಳು.

ಹಿಂದೆ ನಿಂತ ಬಾರ್ಟನ್ನನು, ಆವೇಶದಿಂದ ಬಂದ ಕಣ್ಣೀರನ್ನು ಕರವಸ್ತ್ರದಿಂದ ಒರಸಿಕೊಂಡನು.

ಪ್ರಾರ್ಥನೆ ಮುಗಿದ ನಂತರ, ಅವನೆದುರು ನಿಂತು, ಅವನ ಕೈಗಳಲ್ಲಿ ತನ್ನ ಕೈಗಳನ್ನು ಸೇರಿಸಿ, ಮೆಲ್ಲನೆ, "ನಿನಗೆ ಅಭ್ಯಂತರವಿಲ್ಲದಿದ್ದರೆ ಇಂದಿನಿಂದ ನಮ್ಮ ಬಾಳು ಪ್ರೀತಿಯಿಂದ ಒಂದಾಗಿಸುವ. ನನ್ನ ತಪ್ಪನ್ನು ಮನ್ನಿಸು" ಎಂಗು ಕೇಳಿಕೊಂಡಳು

(—Forgiveness)

# ಮ್ಯಾಟಿಲ್ಡಾಳ ಮೃತ್ಯುಪತ್ರ

ರೀನಿಯು ಯುವಕ; ಸುಂದರ ರೂಪ. ಭವ್ಯ ಮತ್ತು ಆಕರ್ಷಿಕ ಆಕೃತಿ. ಇಷ್ಟಾದರೂ ಅವನು ಸುತ್ತುಮುತ್ತಲಿನ ಜನರನ್ನು ಸಂಶಯ ದೃಷ್ಟಿಯಿಂದ ನೋಡುವ ಸ್ವಭಾವದವ ಕಟುಸತ್ಯದಲ್ಲಿ ಕಟುನಂಬಿಗೆ: ಆದರೆ ಅವನಿದ್ದ ಸಮಾಜದಲ್ಲಿ ಈ ಬಗೆಯ ಆದರ್ಶಗಳಿಗೆ ಸ್ಥಾನವಿದ್ದಿಲ್ಲ ಆದುದರಿಂದಲೇ ಯಾವಾಗಲೂ ಪೆಚ್ಚು ಮೋರೆಯಿಂದಿದ್ದು ಜೀವನದಲ್ಲಿ ಆಗಲೇ ಬೇಸರ ಉಂಟಾದಂತೆ ಇರುತ್ತಿದ್ದ.

ಅವನಿಗೆ ತನ್ನ ಅಣ್ಣಂದಿರಿಬ್ಬರನ್ನು ಕಂಡರೆ ಕೋಪ ಇವನಲ್ಲಿದ್ದ ಸದ್ಗುಣಗಳು, ಅವರಲ್ಲಿರಲಿಲ್ಲ ಮುಖದ ಹೋಲಿಕೆಯೂ ಬೇರೆ ಇತ್ತು. ಇದರ ಕಾರಣವನ್ನು ತಿಳಿಯುವ ಕುತೂಹಲ ನನಗೆ ಅನೇಕ ಸಲ ಬಂದಿತ್ತು. ಅವರು ಬೇರೆ ಬೇರೆಯವರಿಗೆ ಜನಿಸಿರಬೇಕೆಂದು ನನಗೆನಿಸಿತು. ರೀನಿಯ ಹತ್ತಿರದ ಪರಿಚಯವಿದ್ದುದರಿಂದ ನಿಜಾಂಶ ತಿಳಿಯಬೇಕೆಂದು, ಅನೇಕ ಸಲ ಎನಿಸಿದರೂ ಆ ವಿಷಯ ಕೇಳಿ ಅವನ ಮನಸ್ಸು ನೋಯಿಸಬಾರದೆಂದು ಸುಮ್ಮನಿದ್ದೆ. ಆದರೂ ಅವರ ಮನೆತನದ ರಹಸ್ಯ ಬಹಳ ವಿಚಿತ್ರವಿದೆಯೆಂದು ತಿಳಿದಮೇಲೆ, ಅದನ್ನು ತಿಳಿಯಲೇಬೇಕೆಂಬ ಕುತೂಹಲ ಹೆಚ್ಚಿತು.

ವಾಡಿಕೆಯಂತೆ ಅವನೊಂದಿಗೆ ನಾನು ಊಟಕ್ಕೆ ಹೋಟಲಿನಲ್ಲಿ ಸೇರಿ ಕೊಳ್ಳುತ್ತಿದ್ದೆ. ಅಂದು ಅವನೊಬ್ಬನೇ ತನ್ನ ಟೇಬಲಮೇಲೆ ಊಟ ಮಾಡು ತ್ತಿದ್ದುದರಿಂದ ಅವನನ್ನು ಉದ್ದೇಶಿಸಿ "ಮಿತ್ರಾ, ನೀನು ನಿಮ್ಮ ತಾಯಿಗೆ ಮೊದಲನೆಯ ಗಂಡನಿಗೆ ಹುಟ್ಟಿದ್ದಿಯೋ? ಅಥವಾ ಎರಡನೆಯವನಿಗೋ?" ಎಂದು ಕೇಳಿದೆ ರೀನಿಯ ಮುಖವು ಬಿಳಿಪೇರಿತು, ಸ್ವಲ್ಪ ಹೊತ್ತು ಅವನು ಮಾತನಾಡಲಿಲ್ಲ ಚೇತರಿಸಿಗೊಂಡು ಮೆಲ್ಲಗೆ ಹೇಳತೊಡಗಿದ:—

"ನೀನು ನನ್ನ ಆಪ್ತ ಮಿತ್ರನು. ಆದುದರಿಂದಲೇ ನಮ್ಮ ಮನೆತನದ ರಹಸ್ಯವನ್ನು ನಿನಗೆ ಹೇಳುವೆ ಅದನ್ನು, ತಿಳಿದನಂತರ, ವಿವೇಕಶಾಲಿಯಾದ ನೀನು ನನ್ನ ಗೆಳೆತನವನ್ನು ತ್ಯಜಿಸುವದಿಲ್ಲವೆಂದೆನಿಸುತ್ತದೆ. ಏನೇ ಇದ್ದರೂ ನಾನು ಸುಳ್ಳಾಡುವುದಿಲ್ಲ."

" ನನ್ನ ತಾಯಿ ಮ್ಯಾಟಿಲ್ಡಾ ಇವಳು, ಬಹಳ ಸರಳ ಜೀವಿ; ಶಾಂತ ಸ್ವಭಾವದವಳು; ಪರರನ್ನು ಕಂಡರೆ ಗಟ್ಟಿಯಾಗಿ ಮಾತಾಡಲು ಸಹ ಅಂಜು ತ್ತಿದ್ದಳು ಅವಳಲ್ಲಿದ್ದ ಹೇರಳವಾದ ಸಂಪತ್ತಿನಾಶೆಯಿಂದ ಅವಳನ್ನು ಒಬ್ಬನು ಮದುವೆಯಾದ ನಿರ್ಮಲ ಪ್ರೇಮಕ್ಕೆಂದು ನನ್ನ ತಾಯಿ ಅವನೊಂದಿಗೆ ಅನುಭವಿಸಲಾರದ ಯಾತನೆಯನ್ನು ಸಹಿಸಿದಳು ಸರಳವಾದ ದಾಂಪತ್ಯ ಜೀವನವು ಸ್ತ್ರೀಯರಿಗೆ ಭಾಗ್ಯವೆಂಬ ಕಲ್ಪನೆಯು, ಮೃಗಪ್ರಾಯನಾದ ಅವ ನಿಗೆ ಅನುಕೂಲವಾಯಿತು ಎಲ್ಲವನ್ನೂ ಶಾಂತತೆಯಿಂದ ಸಹಿಸಿದಳು ಅವ ನೊಬ್ಬ ಅನಾಗರಿಕ. ಅವನು ನನ್ನ ತಾಯಿಯನ್ನು ಮದುವೆಯಾದ ಒಂದು ತಿಂಗಳಲ್ಲಿ ಅನೇಕ ಸ್ತ್ರೀಯರೊಂದಿಗೆ ಪ್ರೇಮ ವ್ಯಾಪಾರ ನಡೆಸಿದ ನಮ್ಮ ಮನೆಯ ಆವಾರದಲ್ಲಿದ್ದ ಇತರ ಕುಟುಂಬದವರನ್ನು ಕೆಡಿಸಲು ಯತ್ನಿಸಿದ. ಮನೆಯಲ್ಲಿ ಕೆಲಸಕ್ಕಿದ್ದ ಸ್ತ್ರೀಯರೆಲ್ಲರೂ ಅವನ ವಶವಾದರು ಅವನ ನಿತ್ಯ ಜೀವನ ಇಷ್ಟು ಕಲುಷಮಯವಾಗಿದ್ದರೂ ನಮ್ಮ ತಾಯಿಗೆ ನಾವು ಮೂವರು ಜನಿಸಿದೆವು ನಾನು ಅವನಿಗೆ ಜನಿಸಲಿಲ್ಲ ನಮ್ಮ ತಾಯಿಯು ಅವನ ವರ್ತನೆಯನ್ನು ಸಹಿಸುತ್ತ ಸುಮ್ಮನಿರುತ್ತಿದ್ದಳು. ಇಷ್ಟಾದರೂ ಅವಳ ಸುಂದರ ಮುಖದಲ್ಲಿ ನಗು ಇತ್ತು, ಬಾಳು ಸುಖವಾಗಬಹುದೆಂಬ ಆಶೆ, ಪೂರ್ಣ ಮಾಯವಾಗಿರಲಿಲ್ಲ

ನಮ್ಮ ತಾಯಿಯನ್ನು ಅನೇಕ ಸಲ ಮನೆಗೆ ಬಂದು ಮಾತಾಡಿಸು ವವರಲ್ಲಿ, ಸೈನ್ಯದಿಂದ ನಿವೃತ್ತನಾದ ಯೋಧನೊಬ್ಬನಿದ್ದನು. ಅವನ ಹೆಂಡತಿ ತೀರಿಕೊಂಡು ಬಹಳ ದಿನವಾಗಿದ್ದಿತು ಮತ್ತೆ ಮದುವೆಯಾಗಿರಲಿಲ್ಲ. ಅವನ ಹೆಸರು ನನ್ನ ಅಡ್ಡ ಹೆಸರನ್ನು ಹೋಲುತ್ತದೆ. ಅವನದು ತೀರ ನಿರ್ದಾ ಕ್ಷಿಣ್ಯ ವರ್ತನೆ, ಅವನಲ್ಲಿ ಎಂದಿಗೂ ಭಯಕ್ಕೆ ಎಡೆಯಿರಲಿಲ್ಲ ಅವನಿಗೆ ಜಗತ್ತಿನಲ್ಲಿ ಮಿತ್ರರನೇಕರಿದ್ದರು ಹಿಂದಿನ ಮೂಢ ವಿಚಾರಗಳಲ್ಲಿ ಅವನಿಗೆ ನಂಬಿಗೆ ಇರಲಿಲ್ಲ.

ನನ್ನ ತಾಯಿಗೂ, ಈ ಯೋಧನಿಗೂ ಪರಸ್ಪರ ಮಿತ್ರತ್ವವಿದ್ದಿತಂತೆ. ಅವರು ತಮ್ಮ ಪ್ರೇಮ ವ್ಯಾಪಾರವನ್ನು ಬಹಳ ಗುಟ್ಟಾಗಿ ನಡೆಯಿಸಿಕೊಂಡು ಬಂದರಂತೆ. ನಿರ್ಗತಿಕಾವಸ್ಥೆಯಲ್ಲಿ ಯಾವುದು ಆಧಾರವಾಗುವುದೋ ಅದನ್ನೇ ನಂಬಿಕೊಂಡಿರಲು ನಿಶ್ಚಯಮಾಡಿದ ಅವಳ ಮನಸ್ಸು, ಈ ಸೈನಿಕನ

ಇಚ್ಛೆಯಂತೆ ನಡೆಯಲು ಸಮ್ಮತಿಸಿತು. ಆದರೂ ಅಂಜುಬುರುಕುತನ ಅವಳಿಂದ ದೂರವಾಗಲಿಲ್ಲ ಈ ರಹಸ್ಯ ಪ್ರೇಮದಿಂದಾದ ಫಲವೆಂದರೆ ನನ್ನ ಜನನ.

ನನ್ನ ಅಣ್ಣಂದಿರಿಬ್ಬರೂ ತಾಯಿಯನ್ನು ಬಹಳವಾಗಿ ಕಾಡುತ್ತಿದ್ದರು. ಮನೆಯಲ್ಲಿ ಅವಳಿಗೆ ಪ್ರೀತಿಯಿಂದ ಕಾಣುವವ ನಾನೊಬ್ಬನೇ. ನಮ್ಮೀರ್ವ ರಲ್ಲಿ ನಿಜವಾದ ಮಮತೆ ಪ್ರೀತಿ ವಿಶ್ವಾಸವಿತ್ತು ಅವಳ ನಿರ್ಮಲ ಸ್ವಭಾವ ವನ್ನು ಅನೇಕ ಸಲ ನೋಡಿ ಮರುಗುತಿದ್ದೆ ನನ್ನನ್ನು ಕಂಡಾಗ ಅವಳಿ ಗಾಗುತ್ತಿದ್ದ ಸುಖ, ಸಂತೋಷಗಳ ಕಲ್ಪನೆಯುನ್ನು ತಿಳಿಯುತ್ತಿದ್ದೆ.

ಅವಳು ನಮ್ಮನ್ನಗಲಿದಾಗ ನನ್ನ ವಯಸ್ಸು ಹದಿನೇಳು ಮದುವೆ ಯಾಗಿದ್ದರೂ ಅವಳ ಯಾವತ್ತು ಆಸ್ತಿಗ ಅವಳೇ ಅಧಿಕಾರಿಯಾಗಿದ್ದಳಲ್ಲದೆ, ಅವಳ ನಂತರ ತನ್ನ ಆಸ್ತಿಯು ಯಾರಿಗೆ ಸಲ್ಲಬೇಕೆಂಬುದನ್ನೂ ಹೇಳುವ ಅಧಿಕಾರ ಅವಳದಾಗಿದ್ದಿತು. ಅವಳು ಜೀವಂತ ಇದ್ದಾಗಲೇ ಅವ್ಯವಸ್ಥೆ ಯನ್ನು ಮಾಡಿದ್ದಳು.

ಅದರಲ್ಲಿ ಈ ಕೆಳಗಿನಂತೆ ಬರೆದಿತ್ತು

"ಕೆಳಗೆ ಸಹಿ ಮಾಡಿದ ಸ್ವಂತ ಒಪ್ಪಿಗೆಯಿಂದಲೂ, ಎಲ್ಲ ಬಗೆಯ ದೇಹಾರೋಗ್ಯದ ಅವಸ್ಥೆಯಿಂದಲೂ ಇದ್ದಲಿಯೋ ಪಾಲ್ಡನ ಮದುವೆಯ ಹೆಂಡತಿಯಾದ ಮ್ಯಾಟಿಲ್ಡಾ ನಾನು, ನನ್ನ ಕಡೆಯ ಇಚ್ಛೆಯನ್ನು ಈ ರೀತಿ ವ್ಯಕ್ತಗೊಳಿಸುತ್ತಲಿದ್ದೇನೆ

ನಾನು ಈಗ ಮಾಡುತ್ತಿರುವ ತಪ್ಪಿಗಾಗಿ ದೇವರು ಮತ್ತು ನನ್ನ ಪ್ರೀತಿಯ ಮಗನಾದ ರೀನಿಯ ಕ್ಷಮೆ ಬೇಡುತ್ತೇನೆ ನನ್ನ ಮಮತೆಯ ಮಗು, ಈ ಕರುಳಿನ ಕರೆಯನ್ನು ಕೇಳಿ ನನ್ನನ್ನು ಕ್ಷಮಿಸುವನೆಂದು ನಂಬು ತ್ತೇನೆ ನನ್ನ ಜೀವನವೆಲ್ಲ ಒಂದು ಯಾತನೆಯ ಕಾಲವಾಗಿತ್ತು ನನ್ನನ್ನು ಮದುವೆಯಾದ ಗಂಡನು ಕೇವಲ ಆಸ್ತಿಗಾಗಿ ಬಂದಿದ್ದನ್ನೇ ಹೊರತು ಅವನು ಮನಸಾ ನನ್ನನ್ನು ಪ್ರೀತಿಸುತ್ತಿರಲಿಲ್ಲ ಪಶುವಿನಂತೆ ನನ್ನಲ್ಲಿ ವರ್ತಿಸಿ, ಜೀವಿಸಿರುವ ವರೆಗೂ ಕಾಡಿದ, ಹೊಡೆದ, ಮೋಸಗೊಳಿಸಿದ.

"ಅವನ ತಪ್ಪನ್ನು ಮನ್ನಿಸುತ್ತೇನೆ. ಆದರೆ ಅವನಲ್ಲಿ ನನಗೆ ಯಾವ ಬಗೆಯ ಕರುಣೆ ಇಲ್ಲ. ಅವನಾವ ಬಗೆಯ ಉಪಕಾರ ನನಗೆ ಮಾಡಿಲ್ಲ. ಅವನ ಕ್ಷಮೆಬೇಡಲು ನನಗೆ ಇಷ್ಟವಿಲ್ಲ

"ನನ್ನ ಹಿರಿಯ ಮಕ್ಕಳು ಕೇವಲ ಪಶುವೃತ್ತಿಯಲ್ಲಿ ನನ್ನನ್ನು ಕಾಡಿದರು, ಹಿಂಸಿಸಿದರು ಆದರೆ ನಾನು ಜೀವಿಸಿರುವವರೆಗೂ ನನ್ನಿಂದಾದ ಸಹಾಯ ಅವರಿಗೆ ಮಾಡಿದೆ ನನ್ನ ಮರಣಾನಂತರ ಅವರಿಗೇನೂ ನನ್ನಿಂದ ಉಪಕಾರವಾಗಬೇಕಾಗಿಲ್ಲ.

"ಗಂಡಸರೆಂದರೆ ನನಗತಿ ಭಯ ನೀತಿಬಾಹಿರ ಮನೋವೃತ್ತಿಯಿಂದಲೂ, ದೋಷ ಕಲುಷಿತ ಮಾನಸ್ಸನಿಂದಲೂ, ಕೆಟ್ಟ ಕಾರ್ಯ, ಕೊಲೆ, ಮುಂತಾದ ಪಾಪ ಕೃತ್ಯಗಳಿಂದ ಮುಚ್ಚಿದ ಇವರೊಡನೆ ಮಾತು ಸಹ ನನಗೆ ಬೇಡವೆನಿಸುತ್ತದೆ ತಂದೆ, ಪರಮಾತ್ಮನ ಎದುರು ನನಗೇಕೆ ಭಯ? ನನ್ನ ಹೃದಯವೇನು ಹೇಳುತ್ತದೋ ಅದನ್ನೇ ಒಮ್ಮನಸ್ಸಿನಿಂದ ಇಲ್ಲಿ ಬರೆಯುತ್ತೇನೆ ಅದಕ್ಕ ಅಂಕಿತ ಹಾಕುತ್ತೇನೆ.

"ಆದುದರಿಂದ ನನ್ನ ಸ್ವಂತ ಆಸ್ತಿಯನ್ನು ನನಗಾರಲ್ಲಿ ಪ್ರೀತಿ ವಿಶ್ವಾಸವಿದೆಯೋ ಕಷ್ಟಕಾಲದಲ್ಲಿ ನನ್ನನ್ನು ಕೈಬಿಡದೆ ಯಾರು ಕಾಪಾಡಿದರೋ, ಮದುವೆಯಾಗದಿದ್ದರೂ, ಮಮತೆ ಅಭಿಮಾನದಿಂದ ನೋಡಿದರೋ ಅಂತಹ ಷೋರ್ನ್‌ವಾಲರನ್ನು ನನ್ನ ಆಸ್ತಿಗೆ ಉತ್ತರಾಧಿಕಾರಿಯನ್ನಾಗಿ ನೇಮಿಸಿ, ನನ್ನ ಮಮತೆಯ ಮಗನಾದ ರೀಸಿಗೆ ಮುಟ್ಟುವಂತೆ ನೋಡಿಕೊಳ್ಳಬೇಕೆಂದು ಈ ಮೂಲಕ ಹೇಳುತ್ತೇನೆ

"ಇದರ ಸ್ಪಷ್ಟೀಕರಣೆಯನ್ನು ಮುಂದೆ ನನ್ನ ವಕೀಲನೆದುರು ಮತ್ತೊಂದು ಪತ್ರದಲ್ಲಿ ವಿವರಿಸಿದ್ದೇನೆ

"ನನ್ನ ತಾಯಿಯ ವಕೀಲನ ಹತ್ತಿರ ಅವಳ ಮೃತ್ಯುಪತ್ರವಿದ್ದಿತಂತೆ. ಅವಳ ಮರಣಾನಂತರ ನಮ್ಮನ್ನೆಲ್ಲ ವಕೀಲನು ಆಮಂತ್ರಿಸಿದನು. ಅವರ ಮನೆಗೆ ನಾವೆಲ್ಲರೂ ಹೋದ ಸನ್ನಿವೇಶ ಇನ್ನೂ ಚೆನ್ನಾಗಿ ನೆನಪಿನಲ್ಲಿದೆ ಅದೊಂದು ನಮ್ಮ ಮನೆತನದ ವಿಸ್ಮಯಕಾರಕ, ಐತಿಹಾಸಿಕ ಮಹತ್ವದ ವಿಷಯವೆಂದೆನಿಸುತ್ತದೆ.

ನನ್ನ ತಂದೆ, ತಮ್ಮಂದಿರಿಬ್ಬರೂ, ತಮ್ಮ ಆಸನಗಳಲ್ಲಿ ಕುಳಿತಿದ್ದರು. ತಂದೆಯ ಮುಖದ ಮೇಲೆ ಕಟುಕನ ಕಠೋರತೆ ಎದ್ದು ಕಾಣಿಸುತ್ತಿತ್ತು. ವಯಸ್ಸಿನಿಂದ ನೆರತ ಮೀಸೆಯುಳ್ಳ ಆತನ ಮುಖವು ಕಳೆಗುಂದಿತ್ತು ಅಲ್ಲಿ ಸೇರಿದವರಲ್ಲಿ ಆತನೇ ಬಹುವಾಗಿ ವ್ಯಸನಕ್ಕೀಡಾಗಿದ್ದನೆಂಬುವುದು ವ್ಯಕ್ತ

ವಾಗುತ್ತಿತ್ತು. ಮುಂದೇನಾದರೂ ಧೈರ್ಯದಿಂದ ಎದುರಿಸುವ ಶಕ್ತಿ ಅವನಲ್ಲಿ ಇದ್ದಂತೆನಿಸಿತು. ವಕೀಲನು ಮುದ್ರೆಹಾಕಲ್ಪಟ್ಟ ಚೀಲವನ್ನು ನಮ್ಮೆದುರು ಒಡೆದನು.

"ನನ್ನ ಯಾತನಾತೀತ ದುಃಖಮಯ ಜೀವನದಲ್ಲಿ ಬೆಳಕನ್ನು ತೋರಿ, ಪ್ರೀತಿ ಅಂತಃಕರಣಗಳಿಂದ ನನ್ನನ್ನು ಬಸ್ಸಿಗೆ ಹಾಕಿಕೊಂಡು ದಯೆದೋರಿದ ಬೋರ್ನಿವಾಲರಿಗೆ ಅನಂತ ಪ್ರಣಾಮಗಳು. ರೀನಿಯು ಅವರ ಸಂಪರ್ಕದಿಂದ ಜನಿಸಿದವನು. ನನ್ನನ್ನು ನೆನೆದು, ನನ್ನಲ್ಲಿ ದಯೆತೋರಿ, ಇವರೀರ್ವರ ತಂದೆ–ಮಕ್ಕಳಂತೆ ನಡೆದುಕೊಂಡರೆ ನನ್ನಾತ್ಮಕ್ಕೆ ಶಾಂತಿ ದೊರೆಯುವುದು ಖಂಡಿತ. ಇವರೀರ್ವರ ಬಾಳು ಸುಗಮವಾಗಲಿ! ನನ್ನ ಮುದ್ದು ರೀನಿಯು ಸುಖಕಾಣಲಿ; ಪರಮಾತ್ಮನು ಇಷ್ಟನ್ನು ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ಇವು ನನ್ನ ಕಡೆಯ ನಿಮಿಷಗಳಲ್ಲಿ ನಾನು ಕೊನೆಯದಾಗಿ ನೆನೆದ ಬಯಕೆಗಳು."

ಈ ಹೊತ್ತಿಗೆ ನನ್ನ ತಾಯಿಯ ಮದುವೆಯ ಗಂಡನಾದ ಕೊರ್ಸೀಲ ಲಿಯೋಪಾಲ್ಡನು ಅವಸರದಿಂದ ಎದ್ದುನಿಂತು "ಇದರಲ್ಲಿ ನಮಗೆ ವಿಶ್ವಾಸ ವಿಲ್ಲ. ಅವಳಿಗೆ ಸಾಯುವಾಗ ಹುಚ್ಚು ಹಿಡಿದಿದ್ದಿತು" ಎಂದು ಒದರಿದ.

ಇದಕ್ಕೆ ಮಾರುತ್ತರವಾಗಿ ಬೋರ್ನಿವಾಲನು ಮುಂದೆ ಬಂದು "ಈ ಪತ್ರದಲ್ಲಿ ಬರೆದ ವಿಷಯಗಳೆಲ್ಲ ನಿಜ ಸಾಯುವ ಮುನ್ನ ಅವಳಿಗೆ ಪೂರ್ಣ ಅರಿವಿತ್ತೆಂದು ಕಾಗದ ಪತ್ರಗಳ ಮೂಲಕ ನಿರೂಪಿಸಬಲ್ಲೆ" ಎಂದು ಶಾಂತ ಚಿತ್ತದಿಂದ ನುಡಿದ.

ಇವರೀರ್ವರಿಗೂ ಪರಸ್ಪರ ಕೈ ಕೈ ಹತ್ತಿ ಪ್ರಮಾದವಾಗಬಹುದೆಂದು ನಾನು ನೆನೆದೆ. ಆದರೆ ನನ್ನ ಜನನಕ್ಕೆ ಕಾರಣವಾದುದರಿಂದ, ನಾನು ತಂದೆ ಯೆಂದು ಭಾವಿಸಿದ ಬೋರ್ನಿವಾಲರು ಚೇತರಿಸಿಕೊಂಡು, "ಮಹಾ ಶಯರೇ, ನಾನೂ ನೀವೂ ಬೇರೊಂದು ಸ್ಥಳದಲ್ಲಿ ಖಡ್ಗದ ಕದನದಿಂದ ಇದನ್ನು ತೀರ್ಮಾನಿಸಿಕೊಳ್ಳೋಣ; ಈಗಲೇ ನಿಮ್ಮನ್ನು ಕಾತರಗೊಂಡ ನನ್ನ ಖಡ್ಗಕ್ಕೆ ಆಹುತಿಕೊಡುತ್ತಿದ್ದೆ. ಆದರೆ, ನನ್ನ ಮ್ಯಾಟಿಲ್ಡಾಳಿಗೆ ದುಃಖವಾಗಬಹುದೆಂದು ಸುಮ್ಮನಿದ್ದೇನೆ" ಎಂದು ಅಂದನು. ಮತ್ತು–ನನ್ನ

ಕಡೆ ಮುಖ ತಿರುವಿ, " ರೀನೀ, ನೀನು ನನ್ನ ಮಗ. ನೀನು ನನ್ನೊಂದಿಗೆ ಬಂದರೆ ಸಂತೋಷ ನಾನು ಈ ಬಗ್ಗೆ ಒತ್ತಾಯ ಮಾಡಲಾರೆ. ಆದರೆ ಆ ಅಧಿಕಾರವು ನನಗಿದ್ದರೂ ಅದರ ದುರ ಪಯೋಗ ಮಾಡಿಕೊಳ್ಳುವುದಿಲ್ಲ" ಎಂದು ನುಡಿದಾಗ ನನ್ನ ಸಮ್ಮತಿಯ ಪೂರುತ್ತರವೆಂದು ನಾವಿಬ್ಬರೂ ಕೈ ಕುಲುಕುಸಿದೆವು ನಾವಿಬ್ಬರೂ ಹೊರಬಿದ್ದೆವು

" ಎರಡು ದಿನಗಳ ತರುವಾಯ ಬೋರ್ನಿವಾಲನು ಕೋರ್ಸೀಲನನ್ನು ಖಡ್ಗದ್ವಂದ್ವ ಆಟದಲ್ಲಿ ಕೊಂದನಂತೆ ನನ್ನ ಅಣ್ಣಂದಿರು ಪುಕ್ಕತನದಿಂದ ಸುಮ್ಮನಿದ್ದರಂತೆ ಅಂದಿನಿಂದ ನನ್ನ ತಂದೆಯ ಮನೆತನದ ಹೆಸರನ್ನೇ ಬಳಸುತ್ತ ಬಂದೆ ಆತನೂ ಮೂರೂ ವರುಷದ ನಂತರ ನನ್ನನ್ನಗಲಿದನು. ಅವನನ್ನಗಲಿದ ದುಃಖವಿನ್ನೂ ನನ್ನಿಂದ ದೂರವಾಗಿಲ್ಲ ''

ರೀನೀ ಬೋರ್ನಿವಾಲನು ಕುರ್ಚಿಯಿಂದೆದ್ದು ನಿಂತು, ಕೋಣೆಯಲ್ಲಿ ಅತ್ತಿಂದಿತ್ತ ಓಡಾಡುತ್ತ, ಕೊನೆಗೆ ನನ್ನೆದುರು ನಿಂತು " ಸ್ತ್ರೀ ಜನಾಂಗಕ್ಕೆ ಮಾದರಿ ಜೀವನ ನಡೆಯಿಸಿ, ಆ ಜನಾಂಗವು ತನ್ನ ಜೀವನದಿಂದ ಪಾಠ ಕಲಿಯಲೆಂದು ಈ ಬಗೆಯ ಮೃತ್ಯುಪತ್ರವನ್ನು ಬರೆದಿಟ್ಟು ಹೋದ ನನ್ನ ತಾಯಿಯ ಸಾಹಸ, ಅತ್ಯುತ್ತಮ ಕ್ರಮವಾದುದೆಂದೂ, ಮಾರ್ಗದರ್ಶಕ ವೆಂದೂ, ನಾನು ಭಾವಿಸಿದ್ದೇನೆ. ನಿನ್ನ ಅಭಿಪ್ರಾಯವೇನು ?'' ಎಂದು ನನ್ನನ್ನು ಕೇಳಿದ.

ನನ್ನ ಕೈಗಳನ್ನು ಅವನ ಕೈಗಳಲ್ಲಿ ಸೇರಿಸಿ " ಇದರಲ್ಲಿ ಸಂಶಯವೇ ಇಲ್ಲ; ಭಿನ್ನಾಭಿಪ್ರಾಯಕ್ಕೆ ಇಲ್ಲಿ ಎಡೆ ಇಲ್ಲ " ಎಂದು ಕೇಳಿದೆ.

( —The Will )

# ಕಲೆಯ ನೆನಪು

ವಿಷಾದಾಂತ, ಪ್ರಮಾದ ಮತ್ತು ಭಯಾನಕ ಪ್ರಮೇಯಗಳೆಂದರೆ ನನಗೇನು ಆಶ್ಚರ್ಯವೆನಿಸುತ್ತಿರಲಿಲ್ಲ ಯುದ್ಧಗಳಲ್ಲಿ ಬಹಳ ದಿನ ಕೆಲಸಮಾಡಿರುವೆ, ಅನೇಕ ಹೆಣಗಳ ನಡುವೆ ಜೀವಿಸಿರುವೆ ನಿಸರ್ಗದ ನಿಯಮದಲ್ಲೇನಾದರೂ ನಮಗೆ ತಿಳಿಯದಂತೆ ಬದಲಾವಣೆ ಕಂಡುಬಂದರೆ, ನಾವು ಆಶ್ಚರ್ಯಪಡುವುದುಂಟು, ಆದರೆ ಕರುಣಾಜನಕ ನೋಟಗಳು ನಮ್ಮ ಮನಸ್ಸುಗಳನ್ನು ಚಲಿಸಿ ಕರಗಿಸುವಷ್ಟು, ಭೀಕರ ಮತ್ತು ಭಯಾನಕ ದೃಶ್ಯಗಳು ನಮ್ಮನ್ನು ಚಮರಿಸಲಾರವು

ಮಾನವಜೀವಿತದಲ್ಲಿ ದುಃಖಪ್ರಸಂಗಗಳನೇಕವಿರುವವು ಅದರಲ್ಲಿ ತಾಯಿಗೆ ಮಗುವನ್ನಗಲುವುದೊಂದು, ವಿಚಿತ್ರ ದುಃಖವನ್ನು ತಂದೊಡ್ಡುವ ಪ್ರಸಂಗವೆನ್ನಬಹುದು ಮಗುವಿನ ಸಾವು, ಎಷ್ಟು ಕಠೋರವೋ, ತಾಪಕರವೋ, ಅಷ್ಟೇ ತಾಯಿಯ ಸಾವು ವಿಷಾದಮಯವೆಂದೂ ಹೇಳಬಹುದು ಇಂತಹ ಭೀಕರ ಆಘಾತದಿಂದ ಮಾನವನು ತೀರ ಹಣ್ಣಾಗುವನು, ದುಃಖದಿಂದ ಕೃಶನಾಗುವನು. ಅವನ ಜೀವನವೇ ದುರ್ಭರವಾಗುವುದು ಅದುವೇ ಆದ ಗಾಯದಿಂದ ಹರಿಯುವ ರಕ್ತದಿಂದ ಕಾಣುವ ದೃಶ್ಯ ಕಾಲಾಂತರ ಆ ಗಾಯ ಮಾದ ನಂತರ ಅದರ ನೋವು ಮಾಯವಾಗಬಹುದು ಆದರೆ ಅಂತಹ ಪ್ರಮೇಯದ ನೆನಪು ಮಾಯವಾದಂತೆ ಉಳಿಯುವುದು. ಮಾನವನ ಜೀವನದಲ್ಲಿ ಇಂತಹ ಮನ ನೋಯುವ ಪ್ರಸಂಗಗಳೂ, ಸ್ವಂತ ಅನುಭವಗಳೂ, ದೂರದಿಂದಲೇ ನೋಡಿ, ದುಃಖಿಸುವ ಸನ್ನಿವೇಶಗಳೂ ಬಂದು ಹೋಗುವುದುಂಟು. ಎಲ್ಲರ ಜೀವಿತದಲ್ಲಿಯೂ ದುಃಖಮಯ ಸನ್ನಿವೇಶಗಳು ಆಗಿಹೋಗುವುದು, ನಿಸರ್ಗದ ನಿಯಮವೇ. ಆ ಸನ್ನಿವೇಶ ಆದಕಾಲಕ್ಕೆ ಆಗುವ ಅನುಭವಕ್ಕಿಂತಲೂ, ಕೆಲಕಾಲವಾದ ನಂತರ ಅವುಗಳ ನೆನಪಿನಿಂದ ಆಗುವ ನೋವು ಹೆಚ್ಚಿನದೆಂದೆನಿಸುತ್ತದೆ ಒಂದು ಕಟು ನೆನಪು, ಅದರೊಂದಿಗೆ ಅನೇಕ ಇನ್ನಿತರ ನೆನಪುಗಳನ್ನು ತಂದೊಡ್ಡಿ ಯಾತನೆಯು ಹೆಚ್ಚುತ್ತದೆ; ಮನಸ್ಸನ್ನು ಕಲಕುತ್ತದೆ-ಹೃದಯವು ಅದರುತ್ತದೆ-ಮಾನವನು ನಿರುತ್ತರನಾಗುತ್ತಾನೆ. ಇಂತಹ ಒಂದು ನೆನಪು ಮಾಯವಾಗಬೇಕಾದರೆ ಕಾಲ ಬಹಳ ಹಿಡಿಯುವುದು.

ನನ್ನ ಸ್ವಂತ ಅನುಭವಕ್ಕೆ ಬಂದ ಎರಡು ದುಃಖಮಯ, ಸನ್ನಿವೇಶಗಳ ನೆನಪು ನನ್ನಲ್ಲಿ ಮರೆಯಲಾರದ ದುಃಖವನ್ನು ತಂದೊಡ್ಡಿದೆ. ಇಂಥ ಅನುಭವ ಮತ್ತಾರಿಗೂ ಆಗಿರಲಾರದೆಂದು ನನ್ನ ನಂಬಿಕೆ.

ಈ ಹೃದಯವಿದ್ರಾವಕ ಸನ್ನಿವೇಶಗಳ ಪರಿಣಾಮದ ಅನುಭವ, ನಿಮಗಾದರೂ ಆಗಿರಲಿಕ್ಕಿಲ್ಲವೆಂಬ ನನ್ನ ಭಾವನೆ, ಇವುಗಳಲ್ಲೊಂದನ್ನು ನಿಮಗೆ ವಿವರಿಸುತ್ತೇನೆ. ಇದು ಸಂಭವಿಸಿದ ಅನೇಕ ವರುಷಗಳಾದರೂ, ನಿನ್ನೆ ಮೊನ್ನೆ ನಡೆದಂತೆ ನನಗನಿಸುತ್ತಿದೆ ನನ್ನ ಈ ಬಗೆಯ ಭಾವನೆಯೇ ಇದಕ್ಕೆ ಕಾರಣವಾಗಿರಬಹುದೆಂದು ನಾನು ಊಹಿಸುತ್ತೇನೆ

ನನಗೀಗ ವಯಸ್ಸು ಐವತ್ತು ಆಗ ನಾನು ನ್ಯಾಯಶಾಸ್ತ್ರವನ್ನೋದುತ್ತಲಿದ್ದ ತರುಣ ನನ್ನದೊಂದು ಬಗೆಯ ವಿಪರೀತ ಪ್ರಕೃತಿ ಯಾವಾಗಲೂ ಯೋಚನೆಯಲ್ಲಿಯೇ ಇದ್ದು, ಆಧ್ಯಾತ್ಮಿಕ ವಿಚಾರಗಳಲ್ಲಿ ಮನಸ್ಸಿಟ್ಟು ಜೀವಿಸುತ್ತಿದ್ದ ನಿರಾಶಾವಾದಿಗಳಲ್ಲಿ ನಾನೊಬ್ಬ ಏಕಾಂತದಲ್ಲಿರುವುದು ನನಗೆ ರುಚಿಸುತ್ತಿತ್ತು; ಜನಸಂದಣಿ ಇರುವ ಹೋಟಲುಗಳನ್ನೂ, ತುಂಟರ ಚಾವಡಿಗಳನ್ನೂ ಬಿಟ್ಟು ದೂರ ಇರುತ್ತಿದ್ದೆ ಬೆಳಗು ಬೇಗನೆದ್ದು, ಒಬ್ಬನೇ ಕಾಲುನಡೆಯಲ್ಲಿ ತಿರುಗಾಡುವುದೆಂದರೆ, ನನಗೆ ಹೆಚ್ಚು ಪ್ರೀತಿ ಅನೇಕ ಸಲ ಎಂಟು ಗಂಟೆಯವರಗೂ ಲಕ್ಸೆಂಬರ್ಗ ಉದ್ಯಾನವನದಲ್ಲಿರುತ್ತಿದ್ದೆ, ಅಲ್ಲಿ ಕಾಲ ಕಳೆಯುವುದೆಂದರೆ ನನಗೆ ಸಂತೋಷ

ನಿಮಗೆಲ್ಲರಿಗೆ ಈ ವನದ ಪರಿಚಯವಿದೆಯ ? ಇರಲಾರದು ಅದೊಂದು ಬಹು ಪುರಾತನ ಉದ್ಯಾನವನ ಹದಿನೆಂಟನೆಯ ಶತಮಾನದಿಂದಲೂ ನಡೆದು ಬಂದ ಈ ವನವು ಈಗಿನ ಜನರಿಗೆ ರುಚಿಸುವುದೆಂತು ? ಇದೊಂದು ಮುದುಕಿಯ ಮಂದಹಾಸದಂತೆ, ಇನ್ನೂ ನಿಂತಿದೆ ತೋಟದಲ್ಲಿಯ ಅನೇಕ ಗಿಡಬಳ್ಳಿಗಳು ಹುಲುಸಾಗಿ ಬೆಳೆದು, ತೋಟಿಗನೆಷ್ಟು ಪ್ರಯತ್ನಿಸಿದರೂ ತಮ್ಮ ವಕ್ರಮಾರ್ಗವನ್ನು ಬಿಡದೆ, ಶಾಲೆಯ ಮಕ್ಕಳಂತೆ ಅಲ್ಲಲ್ಲಿ ಬೆಳೆದು ನಿಂತಿದ್ದವು. ನಡುನಡುವೆ ಬೆಳೆದಿದ್ದ ಪೊದೆಗಳ ನಡುವೆ ಇದ್ದ ಕಾಲುದಾರಿಯಲ್ಲಿ ವಿಹರಿಸುವುದೆಂದರೆ, ನನಗೆ ಬಹು ಆಶೆ. ಯಾವ ಮೂಲೆಯಲ್ಲಿ ನೋಡಿದರೂ ಜೇನಿನಗೂಡು. ಜೇನುಹುಳಗಳ ಗುಂಗುಂ ಗಾನ ಕೇಳುವುದೆಂದರೆ ನನಗೆ ಬಹಳ ಆನಂದ.

ದಿನವೂ, ಅಲ್ಲಿ ಕುಳಿತುಕೊಂಡು, ಕೊಂಚಹೊತ್ತು ಓದುವದು ನನ್ನ ರೂಢಿ. ಕೆಲವೊಂದು ಸಮಯ ಓದುತ್ತಿದ್ದ ಹಾಗೆ, ವೈನುರೆತು ಸುತ್ತಲಿನ ಪ್ಯಾರಿಸ್ ನಗರದ ಗಲಭೆಯನ್ನು ಅವಲೋಕಿಸುತ್ತ ಕುಳ್ಳಿರುವುದೂ ಉಂಟು. ಇಲ್ಲಿಯ ಶಾಂತ ವಾತಾವರಣವು ನನ್ನ ಮನಸ್ಸಿಗೆ ಬಹಳ ಆನಂದವನ್ನುಂಟು ಮಾಡುತ್ತಿತ್ತು.

ಹೀಗೆ ದಿನವೂ ನಾನಿಲ್ಲಿ ಕುಳಿತಿರುವಾಗ, ನನ್ನೆದುರು ಮತ್ತೋರ್ವ ವಿಚಿತ್ರ ಮನುಷ್ಯನನ್ನೂ ಕಾಣುತ್ತಿದ್ದೆ; ಈತನೊಬ್ಬ ಮುದುಕ. ಅವನ ಉಡಿಗೆ-ತೊಡಿಗೆಗಳು ಬಹು ವಿಚಿತ್ರಬಗೆಯದಾಗಿದ್ದವು. ಹಳೆಯ ತರಹದ ನಿಲುವಂಗಿ, ಶಿಕಾರಿಗೆ ಹೊರಡುವಾಗ ಧರಿಸುವ ಬಿಗಿ ಚಲ್ಲಣ, ಹಳೆತರಹದ ಹ್ಯಾಟ್, ಮೇಲೆ, ಬಂಗಾರದಂತೆ ಹೊಳೆಯುವ ಅಂಗಿಯ ಗುಂಡಿಗಳು, ಎಲ್ಲರ ದೃಷ್ಟಿಯನ್ನೂ ಆಕರ್ಷಿಸುತ್ತಿದ್ದವು. ಅವನ ಉಡುಪು ಹಿಂದಿನ ಹಳೆಯಕಾಲದ ಅನೇಕ ಸನ್ನಿವೇಶಗಳ ನೆನಪನ್ನು ತಂದುಕೊಡುತ್ತಿತ್ತು.

ಬಹಳ ತೆಳುವಾದ ಅವನ ದೇಹಾಕೃತಿ, ಮುಖದಲ್ಲಿ ಕಂಡುಬರುವ ತಿಳಿನಗೆ, ಪಿಳಿಪಿಳಿ, ಮಿನುಗುವ ಕಣ್ಣುಗಳು, ಬಂಗಾರದ ತಗಡು ಹಾಕಲ್ಪಟ್ಟ ಕೈಕೋಲು, ಯಾರ ದೃಷ್ಟಿಯನ್ನೂ ಸೆಳೆಯುತ್ತಿತ್ತು. ಒಟ್ಟಿನಲ್ಲಿ ನೋಡಿದರೆ ಒಮ್ಮೆಲೇ ನಗು ಬರುವಂತಿತ್ತು, ಈತನ ಲಕ್ಷಣಗಳು.

ಅವನನ್ನು ಮೊದಲಿಗೆ ಕಂಡಾಗ ನನಗೆ ಬಹಳ ಆಶ್ಚರ್ಯವೆನಿಸಿತು. ದಿನಗಳುರುಳಿದಂತೆಲ್ಲ ಇವನ ಬಗ್ಗೆ ಉತ್ಸುಕತೆ ಹೆಚ್ಚಾಗಿ, ಅವನನ್ನು ಹಿಂಬಾಲಿಸಿ, ಹಿಂದಿನಿಂದ ಆತನ ಚರ್ಯೆಗಳನ್ನು ಲಕ್ಷಿಸುತ್ತಿದ್ದೆ. ಇಷ್ಟಾದರೂ ಆತನೊಂದಿಗೆ ನಾನು ಮಾತುಬೆಳೆಸುವ ಗೋಜಿಗೆ ಹೋಗಲಿಲ್ಲ. ದೂರದಿಂದಲೇ ಪೂದೆಗಳ ಮರೆಯಲ್ಲಿ ನಿಂತು, ಆತನ ವಿಚಿತ್ರ ರೂಪವನ್ನು ನೋಡುತ್ತಿದ್ದೆ.

ಒಂದು ದಿನ ಅವನು, ತಾನೊಬ್ಬನೇ ಆ ವನದಲ್ಲಿರುವನೆಂಬ ಭಾವನೆಯಿಂದ ಇರಬಹುದು, ಹುಡುಗನಂತೆ ಜಿಗಿಯತೊಡಗಿದನು. ಯಾರೊಂದಿಗೋ ಮಾತನಾಡುವಂತೆ ನಟಿಸುತ್ತಿದ್ದನು. ಎದುರಿಗಿದ್ದವರೊಂದಿಗೆ ಬೇಡುತ್ತಿರುವಂತೆ ಬಾಗಿ, ವಿನಯದಿಂದ ನಮಸ್ಕರಿಸುತ್ತಿದ್ದನು. ಎಂದೂ ಕಾಣದ ಚಟುವಟಿಕೆ, ಅಂದು ಅವನಲ್ಲಿ ಕಂಡುಬಂದುದು ನನಗೇಕೋ ಹೊಸತೆನಿ

ಸಿತು ಜತೆಗೆ ಯಾವ ಸ್ತ್ರೀ ಇಲ್ಲದಿದ್ದರೂ ಬಹಿರಂಗವಾದ ಅಂತಹ ಪ್ರದೇಶದಲ್ಲಿ ನರ್ತನ ಮಾಡತೊಗಿದನು ನಯವಿನಯವಾಗಿ ಗಾಳಿಯಲ್ಲಿ ಯಾರೊಂದಿಗೋ ಮಾತನಾಡುತ್ತಿದ್ದನು

ಇದೆಲ್ಲವನ್ನೂ ನೋಡಿ ನನಗೆ ಮಹದಾಶ್ಚರ್ಯವೆನಿಸಿತು. ನಡೆಯುತ್ತಿರುವುದೇನು ನಿಜವೆ, ಕನಸೇ ಎಂಬುವುದನ್ನು ನಂಬಲಾರದಂತಿತ್ತು. ಅವನು ಹುಚ್ಚನೇ ಅಥವಾ ನಾನು ಹುಚ್ಚನೇ ಎಂಬ ಸಂಶಯವು ನನಗುಂಟಾಯಿತು ಅನಂತರ ಆ ಮುದುಕನು ನಿಂತಲ್ಲಿಂದ ಕೆಲವು ಹೆಜ್ಜೆಗಳನ್ನು ಮುಂದಿಟ್ಟು, ಬಾಗಿ ಓರ್ವ ಸ್ತ್ರೀಯನ್ನು ಮಾತನಾಡಿಸುವಂತೆ ನಟಿಸಿ, ಅಲ್ಲಿದ್ದ ಎಳೆ ಬಳ್ಳಿಗಳನ್ನು ಅಲುಗಾಡುವ ಕೈಗಳಿಂದ ಮುದಿಟ್ಟು ಮತ್ತೆ ಹಿಂತಿರುಗಿದನು ಇದು ವಿಚಿತ್ರವೆನಿಸಿತು.

ಅಂದಿನಿಂದ ನಾನವನನ್ನು ದಿನವೂ ಎವೆ ಇಕ್ಕದೇ ನೋಡುವುದು ನನ್ನ ರೂಢಿಯಾಯಿತು ದಿನವೂ ಅದೇ ಬಗೆಯಾಗಿ ಅವನು ವರ್ತಿಸತೊಡಗಿದನು ಈ ವಿಚಿತ್ರ ಮನುಷ್ಯನನ್ನು ಮಾತನಾಡಿಸಬೇಕೆಂದು ನನ್ನ ಮನಸ್ಸು ಹಾತೊರೆಯುತ್ತಿತ್ತು ಒಂದು ದಿನ ಧೈರ್ಯದಿಂದ ಅವನೆದುರು ನಿಂತು "ನಮಸ್ಕಾರ. ಇಂದು ಹವೆ ಬಹಳ ಸುಖವಲ್ಲವೆ?" ಎಂದು ಮಾತನಾಡಿಸಿದೆ ಆತನು ಬಾಗಿ ವಿನಯದಿಂದ "ಅಹುದು, ಈ ದಿನ ಹವೆಯು ಬಹು ಸುಂದರವಾಗಿದೆ! ಈ ಬಗೆಯ ಸುಂದರ ಹವೆ ಅನೇಕ ದಿನಗಳಿಂದ ಇದೆ ಅಲ್ಲವೆ?" ಎಂದು ಮಾರುತ್ತರವಿತ್ತ

ಒಂದು ವಾರದೊಳಗಾಗಿ ನಮ್ಮ ಮೈತ್ರಿ ಹೆಚ್ಚಿತು. ಆ ಮುದುಕ ಮನಬಿಚ್ಚಿ ಮಾತನಾಡತೊಡಗಿದ ತನ್ನ ಕತೆಯನ್ನು ಹೇಳತೊಡಗಿದ:

ಹದಿನೈದನೆಯ ಲೂಯೀ ಕಾಲದಲ್ಲಿ ಈತನೊಂದು ನಾಟಕಗೃಹದಲ್ಲಿ ನಾಟ್ಯಾಚಾರ್ಯನಾಗಿದ್ದನಂತೆ. ತನ್ನಲ್ಲಿದ್ದ ಆ ಬೆಲೆಬಾಳುವ ಸುಂದರ ಕೈಕೋಲು ಆಗ ಕ್ಲೆಮೆಂಟದ ಜಮೀಂದಾರನು ಬಹುಮಾನವಾಗಿತ್ತುದಂತೆ. [ನ]ರ್ತನದ ಬಗ್ಗೆ ಮಾತು ಬಂದಿತೆಂದರೆ, ಅವನು ಬಹು ಹಿಗ್ಗಿನಿಂದ ಮೈಮರೆತು [ತ]ಾನು, ತಾನು ಮಾತನಾಡುತ್ತಿದ್ದನು.

ಒಂದು ದಿನ ಅವನು ತನ್ನ ಜೀವನದ ರಹಸ್ಯದ ವಿಷಯಗಳನ್ನು ವಿವರಿಸತೊಡಗಿದ: "ನನ್ನ ಹೆಂಡತಿ, ಲಾ ಕ್ಯಾಸ್ಪ್ರೀಸ, ಇಲ್ಲಿಗೆ ಮಧ್ಯಾಹ್ನದ

ಸಮಯಗಳಲ್ಲಿ ಬರುವಳು. ಆಗ ಅವಳ ಪರಿಚಯ ನಿಮಗೆ ಮಾಡಿಕೊಡು ತ್ತೇನೆ, ತಾವು ಬಯಸಿದರೆ ನಮ್ಮ ಹಿಂದಿನ ಜೀವನದಲ್ಲಿ ನಮಗೆ ಆನಂದ ವನ್ನಿತ್ತ ವಸ್ತುಗಳಲ್ಲಿ ಈಗ ಉಳಿದಿರುವುದೆಂದರೆ ಈ ಉದ್ಯಾನವನ ಇದೊಂದು ಪುರಾತನ ವಸ್ತುವಿಲ್ಲದಿದ್ದರೆ, ನಮ್ಮ ಜೀವನವೇ ನೀರಸವಾಗುತ್ತಿತ್ತು. ಇದರ ಲ್ಲೇನೂ ಹೊಸತಿಲ್ಲ ಆದರೂ ಇದೊಂದು ಮಹತ್ವದ ವಸ್ತುವಿನಂತೆ ನಮಗೆ ತೋರುತ್ತಿದೆ ಅಲ್ಲವೆ? ಇಲ್ಲಿ ಬಂದು ಈ ಹವೆಯನ್ನು ಸೇವಿಸುವಾಗ, ನನ್ನ ಎಳೆವಯಸ್ಸಿನ ಹುರುಪನ್ನು ಅನುಭವಿಸಿದ ಭಾವನೆ ನನಗುಂಟಾಗುತ್ತದೆ. ನಾವಿಬ್ಬರೂ ಇಲ್ಲಿ ಪ್ರತಿದಿನವೂ ಮಧ್ಯಾಹ್ನ ಪೂರ್ತಿಯಾಗಿ ಇದ್ದು ಬಿಡುವೆವು: ಆದರೆ ನಾನು ಮಾತ್ರ ಮುಂಜಾನೆ ಬೇಗ ಏಳುವುದರಿಂದ, ಒಬ್ಬನೇ ಇಲ್ಲಿಗೆ ಬಂದು ಹೋಗುವ ರೂಢಿಯನ್ನಿಟ್ಟುಕೊಂಡಿದ್ದೇನೆ."

ಅಂದು ಮಧ್ಯಾಹ್ನದ ಊಟವಾದನಂತರ ಮತ್ತೆ ಆ ಉದ್ಯಾನವನಕ್ಕೆ ಬಂದೆ ಆ ಸಮಯಕ್ಕೆ, ಆತನು ತನ್ನ ಹೆಂಡತಿಯ ಪರಿಚಯಮಾಡಿಕೊಟ್ಟ. ಶ್ರೀಮತಿ ಲಾ ಕ್ಯಾಸ್ಟ್ರೀಸಳು ಬಹು ಪ್ರಖ್ಯಾತ ಹೆಂಗಸು ಅನೇಕ ನೃತ್ಯಗಳಲ್ಲಿ ಹೆಸರುಗಳಿಸಿ, ಹಾಡುಗಾರಿಕೆಯಲ್ಲಿ ಯಶಸ್ಸು ಸಂಪಾದಿಸಿ, ಬಹು ಮಂದಿ ಕಲಾವಿದರ ಮೆಚ್ಚುಗೆ ಪಡೆದು, ಅನೇಕ ಯುವಕರ ಆರಾಧ್ಯದೇವತೆಯಾಗಿ, ಇದ್ದರೂ, ತನ್ನ ಮಾನವನ್ನು ಹಾಳು ಮಾಡಿಕೊಳ್ಳದೇ ಕಲಾಸೇವೆಯನ್ನು ಉತ್ತಮ ರೀತಿಯಲ್ಲಿ ಮಾಡಿ, ಈಗ ವಯಸ್ಸಿನಿಂದ ಹಣ್ಣಾಗಿರುವಳು. ಹಿಂದಿನ ಕಾಲದ ಕಲಾಜೀವನದ ಕುರುಹು ಅವಳಲ್ಲಿ ಎದ್ದು ಕಂಡ್ಬು ಬರುತ್ತಿತ್ತು ಅನೇಕ ರಾಜಮಹಾರಾಜರನ್ನು ತನ್ನ ಸಂಗೀತ-ನೃತ್ಯ ವಿದೆ ಯಿಂದ ಸಂತೈಸಿ, ಅವರ ಮೆಚ್ಚುಗೆ ಪಡೆದ ಇವಳನ್ನು ಈಗ ನೋಡಿದರೆ ಅಯ್ಯೋ ಎನಿಸುತ್ತಿತ್ತು. ಅವಳ ಬಾಗಿದ ಬೆನ್ನು, ತೆಳುವಾದ ಗಿಡ್ಡ ಆಕೃತಿ ಯನ್ನು ನೋಡಿದರೆ ಮುಪ್ಪು ಬಂದರೆ ಎಷ್ಟು ಕಠಿಣವೆಂಬುದು ವಿದಿತ ವಾಗುತ್ತಿತ್ತು.

ಎಲ್ಲರೂ ಅಲ್ಲಿದ್ದ ಬೆಂಚಿನ ಮೇಲೆ ಕುಳಿತೆವು, ಮೇ ತಿಂಗಳಾದುದರಿಂ ಹೂವಿನ ಸುವಾಸನೆ ನಮ್ಮೆಲ್ಲರನ್ನು ಸಂತೋಷದಲ್ಲಿ ಮುಳುಗಿಸಿತ್ತು. ಗಿಡ ಎಲೆಗಳಿಂದ ನಡುವೆ ಸೂಸಿ, ಪ್ರಕಾಶಿಸುತ್ತಿದ್ದ ಎಳೆ ಸೂರ್ಯನ ಕಿರಣಗಳು, ಮನಸ್ಸಿಗಾನಂದವನ್ನುಂಟು ಮಾಡುತ್ತಿದ್ದವು. ಶ್ರೀಮತಿ ಲಾ ಕಾಸ್ಟ್ರೀಸಳ

ಕಪ್ಪು ಬಟ್ಟೆಗಳ ಮೇಲೆ ಬಿದ್ದ ಸೂರ್ಯನ ಕಿರಣಗಳು, ಬಂಗಾರದ ತುಣುಕು ಗಳಂತೆ ಪ್ರಕಾಶಿಸುತ್ತಲಿದ್ದವು

ತೋಟದಲ್ಲಿ ಯಾರೂ ಇರಲಿಲ್ಲ, ಆ ನಿರ್ಜನವಾದ ಪ್ರದೇಶದಲ್ಲಿ ಮನಸ್ಸಿಗೆ ಆಹ್ಲಾದವಾಗುತ್ತಿತ್ತು. ದೂರದಲ್ಲಿ ಜನರ ಸಂದಣಿಯ ಸದ್ದು ಸ್ವಲ್ಪ ಸ್ವಲ್ಪ ಕೇಳಿಬರುತ್ತಿತ್ತು

"ಮಹಾಶಯರೆ, 'ಮಿನ್ನೆಟ್' ಎಂಬ ನೃತ್ಯದ ಹೆಸರು ಬಹಳ ಕೇಳಿದ್ದೇನೆ ಇದರರ್ಥ, ಇತರ ವಿವರಗಳನ್ನು ತಾವು ತಿಳಿಸಬಲ್ಲಿರಾ?" ಎಂದು ಕೇಳಿದೆ

"ಮಿನ್ನೆಟ್, ಎಂಬುದನ್ನು ತಿಳಿಯಲು ನೀವು ತವಕಿಸುತ್ತಿರುವುದು ಸಂತೋಷವೆನಿಸುತ್ತದೆ. ಆದೊಂದು ರಾಜನೃತ್ಯ! ನೃತ್ಯಗಳಲ್ಲಿ ಅತಿ ಹೆಚ್ಚಳವನ್ನು ಪಡೆದಿರುವುದು. ಈಗಲ್ಲಿದೆ ಅದಕ್ಕೆ ಮಹತ್ವ? ರಾಜರು ಅದಕ್ಕೆ ಪೋಷಣೆ ಯನ್ನಿತ್ತಾಗ ಆ ನರ್ತನಕ್ಕೆ ಮಹತ್ವವಿತ್ತು. ಈಗ ಅದು ಪ್ರಯೋಗದಲ್ಲಿಲ್ಲ. ಸಾಮಾನ್ಯ ಜನರಿಗೆ ಅದು ಈಗ ರುಚಿಸುವುದಿಲ್ಲ" ಎಂದು ಮಾರುತ್ತರವಿತ್ತ.

ಆ ನೃತ್ಯವನ್ನು ನನಗ ಪ್ರತ್ಯಕ್ಷ ತೋರಿಸಲು ಯತ್ನಿಸಿದ ವಯಸ್ಸಾ ದುದರಿಂದ ಅಷ್ಟು ಸುಂದರವಾಗಿ ಪ್ರದರ್ಶಿಸಲಾಗಲಿಲ್ಲ ಕೊನೆಗೆ ಅವನು ನಿರುತ್ಸಾಹದಿಂದ ಸುಮ್ಮನಾದನು

ಪಕ್ಕದಲ್ಲಿ ಸುಮ್ಮನೇ ಕುಳಿತಿದ್ದ ಅವನ ಹೆಂಡತಿಯನ್ನುದ್ದೇಶಿಸಿ, "ಇವರು ನಿನ್ನ ಆ 'ಮಿನ್ನೆಟ್' ನೃತ್ಯವನ್ನು ನೋಡಬೇಕೆಂದು ಮನಸ್ಸು ಮಾಡಿರುವರು ನೀನು ನಾನು, ಇಬ್ಬರೂ ಸೇರಿ ನರ್ತಿಸಿದಲ್ಲಿ ಬಹಳ ಉಪಕಾರ ಮಾಡಿದಂತಾಗುವದು ಇವರ ಉತ್ಸುಕತೆ ಬಹಳ ಇರುವುದು" ಎಂದು ಸೂಚಿಸಿದ ಕೂಡಲೇ ಆ ಮುದುಕಿ ಬಹಳ ಸಂತೋಷದಿಂದ ತನ್ನ ಸಮ್ಮತಿಯನ್ನು ಸೂಚಿಸಿ, ನರ್ತನೆಗೆ ಎದುರು ನಿಂತಳು.

ಅವರೀರ್ವರು ನಿಂತ ಭಂಗಿ ಅವರ್ಣನೀಯವಾಗಿದ್ದಿತು; ಅದೊಂದು ಅದ್ಭುತ ನೃತ್ಯವಾಗಿತ್ತು. ಅವರ ಚಲನವಲನಗಳು ಯಂತ್ರದಂತೆ ಅಷ್ಟು ಶಾಸ್ತ್ರೀಯವಾಗಿದ್ದು ಆ ನೃತ್ಯ ಬಹಳ ಅದ್ಭುತವಾಗಿತ್ತು. ಅಷ್ಟು ವಯಸ್ಸಾ ಗಿದ್ದರೂ, ಈ ಕಲೆಯಲ್ಲಿ ಅವರು ತೋರಿದ ನಿಪುಣತೆ ಅಪ್ರತಿಮವಾದುದು. ನಾನು ಬೆರಗಾಗಿ ಮೂಕನಂತೆ ದಂಗುಬಡಿದು ನೋಡುತ್ತ ನಿಂತುಬಿಟ್ಟೆ.

ಆದರೆ ಅಂತಹ ಇಳಿವಯಸ್ಸಿನಲ್ಲಿ, ಅವರ ನೃತ್ಯ ಇತರರಿಗೆ ಬಹು ಮನರಂಜಕವೆನಿಸದಿದ್ದರೂ, ಅದರ ಇಂಗಿತವನ್ನು ತಿಳಿದ ನನಗೆ ರುಚಿಸಿತು ಆದರೆ ಸಾಮಾನ್ಯ ಜನರಿಗೆ ಅದೊಂದು ಕೈಗೊಂಬೆಯ ಕುಣಿತದಂತಿತ್ತು; ಪರಿಹಾಸದಿಂದ ನಗಲೂಬಹುದಾಗಿತ್ತು

ನೃತ್ಯ ಮುಗಿದ ಕೂಡಲೇ ಅವರು ಆವೇಶದಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡು, ಹಿಂದಿನ ಒಳ್ಳೆಯ ದಿನಗಳನ್ನು ನೆನೆದು ಅತ್ತುಬಿಟ್ಟರು. ಎಂತಹ ಕಲೆಯ ಮೋಹ ?

ಮೂರು ದಿನಗಳು ಕಳೆದ ಮೇಲೆ. ಅವರನ್ನು ಕಾಣಲು ಆಗದೆ ಹಳ್ಳಿಗೆ ಹೋಗಬೇಕಾಯಿತು ಮತ್ತೆ ಎರಡು ವರುಷಗಳು ಕಳೆದು, ಪ್ಯಾರಿಸ್ ನಗರಕ್ಕೆ ಬಂದು ಆ ಉಪವನಕ್ಕೆ ಬಂದು ನೋಡಿದಾಗ, ಉದ್ಯಾನವನವು ಅಲ್ಲಿರಲಿಲ್ಲ. ನಗರವು ವಿಸ್ತಾರವಾಗಿ, ಆ ಸ್ಥಳದಲ್ಲಿ ಗಡಿಬಿಡಿಯ ರಸ್ತೆಗಳು ಏರ್ಪಟ್ಟಿದ್ದವು ಇದು ಮಾಯವಾದುದರಿಂದ, ಆ ವಯಸ್ಸಾದ ದಂಪತಿಗಳು ಯಾವ ಬಗೆಯಾದ ದುಃಖಕ್ಕೊಳಗಾದರೆಂಬುವುದನ್ನು ಊಹಿಸಲು ನನಗೆ ಅಸಾಧ್ಯವಾಯಿತು. ಸರಕಾರವು ಈ ಬಗೆಯಾಗಿ, ಆ ವನವನ್ನು ನಿರ್ಮೂಲ ಮಾಡಿದುದು ಅವರ ಜೀವನದಲ್ಲಿ ವಿಪತ್ತನ್ನು ತಂದೊಡ್ಡಿರಬೇಕು, ಅವರಿಗೆ ಜೀವನವೇ ಬೇಸರಬಂದು ಹುಚ್ಚು ಹಿಡಿದು ಗೊಂದಲದ ಬೀದಿಗಳಲ್ಲಿ ಅಲೆದಾಡುತ್ತಿರಬೇಕು; ಇಲ್ಲವೆ ಚಂದಿರನು ಪ್ರಕಾಶಿಸುವ ರಾತ್ರಿಗಳಲ್ಲಿ ಹೊತ್ತಾದ ಮೇಲೆ, ನಿರ್ಜನವಾದ ಸಮಯಗಳಲ್ಲಿ ಅಲ್ಲಿಗೆ ಇಬ್ಬರೇ ಬಂದು ಸ್ವಲ್ಪ ಹೊತ್ತು ನಿಂತು, ಹಿಂದಿನ ಸುಖದ ಕಾಲವನ್ನು ನೆನೆದು ನಿರಾಶೆಯಿಂದ ಮನೆಗೆ ಹಿಂತಿರುಗುತ್ತಿರಬಹುದೆ? ಅಥವಾ ಇಬ್ಬರೂ ಇಹಲೋಕದ ಯಾತ್ರೆ ಮುಗಿಸಿರಬಹುದೆ ? ಈ ಪ್ರಶ್ನೆ ಬಗೆಹರಿಯದೆ ಹಾಗೆಯೇ ಉಳಿದಿದೆ.

ಇಂದಿಗೂ ಆ ಸ್ಥಳಕ್ಕೆ ಹೋದಾಗ ಅವರ ನೆನಪು ಬಂದು ನನ್ನೆದೆ ನೀರಾಗುತ್ತದೆ. ಕಲಾವಿದರನ್ನು ದೇಶವು ಈ ಬಗೆಯಾಗಿ ನಿರ್ಲಕ್ಷಿಸಿ, ಅವರ ಬಗ್ಗೆ ತೋರುವ ಅನಾದರಣೆಗೆ ನನ್ನ ಕನಿಕರ ಹೆಚ್ಚುತ್ತದೆ, ನನಗೂ ದುಃಖ ತುಂಬಿ ಬರುತ್ತದೆ ಹೀಗಾಗುವುದೊಂದು ವಿಲಕ್ಷಣವೆಂದು ನಿಮಗೆಲ್ಲರಿಗನಿಸಬಹುದು; ಆದರೆ ನನಗಾಗುತ್ತಿರುವ ಅನುಭವವನ್ನು ನಿಮ್ಮ ಮುಂದಿಟ್ಟಿರುತ್ತೇನೆ.

( —Minnet )

---

# ಕೊಲೆಗಡಕ

ನ್ಯಾಯಾಲಯದಲ್ಲಿ ಓರ್ವ ತರುಣ ವಕೀಲನು, ತಾನು ಪಕ್ಷವಹಿಸಿ ವಾದಿಸುತ್ತಲಿದ್ದ ಕೇಸಿನ ಬಗ್ಗೆ ಎಲ್ಲ ವಿವರಗಳನ್ನೂ ತಿಳಿಸಬೇಕೆಂಬ ಉತ್ಸುಕತೆಯಿಂದ, ಒಳ್ಳೇ ಧೋರಣೆಯಲ್ಲಿ ಮಾತನಾಡುತ್ತಿದ್ದನು ಚಿಕ್ಕವನಾದರೂ ಅವನ ಮಾತುಗಳು ಬಹಳ ಬೆಲೆಯುಳ್ಳವಾಗಿದ್ದವು ತನ್ನ ಕಕ್ಷಿಗಾರನು ನಿರ್ದೋಷಿಯೆಂಬಂಶವನ್ನು ಪ್ರತಿಪಾದಿಸಲು ಅವನು ಧೈರ್ಯದಿಂದ ಜೂರಿಗಳ ಮುಂದೆ ನಡೆಸಿದ ವಾದ ಹೀಗಿತ್ತು :

“ಈ ಕೇಸಿನ ವಿವರಗಳು ಎಲ್ಲರಿಗೂ ತಿಳಿದವುಗಳೇ. ನನ್ನ ಕಕ್ಷಿಗಾರನು ಪ್ರಾಮಾಣಿಕನು; ಒಳ್ಳೆಯ ನಡತೆಯವನು ನಿಸ್ವಾರ್ಥದಿಂದ ಕೆಲಸ ಮಾಡುವುದು, ಉಂಡಮನೆಗೆ ಎರಡು ಬಗೆಯದಿರುವುದು, ಆಡಿದಂತೆ ನಡೆಯುವುದು, ಇವುಗಳೇ ಅವನ ನಡವಳಿಕೆಯ ಲಕ್ಷಣಗಳು ಸಿಟ್ಟಿನ ಭರದಲ್ಲಿ ಅವನೇಕೆ ತನ್ನ ಯಜಮಾನನ ಕೊಲೆ ಮಾಡಿದನೆಂಬ ವಿಷಯದ ಕಾರಣವು ನನಗಂತೂ ತಿಳಿಯದಾಗಿದೆ ನಾನೆಷ್ಟು ಯೋಚಿಸಿದರೂ, ಅದರ ವಿವರಗಳು ಅಗೋಚರವಾಗಿಯೇ ಉಳಿದಿವೆ. ಈ ಕೇಸಿನ ವಿವರಗಳನ್ನೂ ತಮ್ಮ ಮುಂದೆ ಇಡುವಾಗ ತಮ್ಮ ಮನಸ್ಸನ್ನು ಹೆಚ್ಚು ಅನಾವಶ್ಯಕ ವಿಷಯಗಳಿಂದ ನೋಯಿಸುವುದಿಲ್ಲ. ಪ್ರಾಮಾಣಿಕನಾದ ಇವನು ಈ ರೀತಿ ಕೊಲೆಮಾಡಲು, ಇವನೇತಕ್ಕೆ ಪ್ರೇರಿತನಾದನೆಂಬ ವಿಷಯದ ಹಿನ್ನೆಲೆಯ ಬಗ್ಗೆ ಕೆಲವು ಸೂಕ್ಷ್ಮವಾದ ಅಂಶಗಳನ್ನು ಮಾತ್ರ ತಮ್ಮ ಮುಂದಿಡುವೆನು; ಗಮನಿಸಬೇಕು. ಇವನು ದೋಷಿಯೇ ಎಂಬುದನ್ನು ನೀವು ನಿರ್ಣಯಿಸಬೇಕಾದರೆ, ನಾನು ವಿವರಿಸುವ ವಿಷಯಗಳು ಅವಶ್ಯವೆಂದು ನನ್ನ ವಾದ!” ಎಂದು ಜೂರಿಗಳ ಮುಂದೆ ಆ ತರುಣ ವಕೀಲನು ಹೇಳುತ್ತ ತನ್ನ ಮಾತನ್ನು ಮತ್ತೆ ಹೀಗೆ ಮುಂದುವರಿಸಿದನು :

“ಜಾನ್ ನಿಕೋಲೆಸ್ ಲೂಗೇರನು ಸುಶಿಕ್ಷಿತ ಮನೆಯಲ್ಲಿ ಜನಿಸಿದನು. ಅವರ ಮನೆತನದವರು ಪ್ರಾಮಾಣಿಕರೆಂದು ಹೆಸರು ಗಳಿಸಿದ್ದರು. ಯಾವಾಗಲೂ ತಮ್ಮ ಮನೆತನದ ಅಂತಸ್ತಿನ ಬಗ್ಗೆ, ಗೌರವದ ಬಗ್ಗೆ ಅವನಿಗೆ ಹೆಚ್ಚು ಅಭಿಮಾನ.

"ತನ್ನ ಮನೆತನದವರು ಪ್ರಾಮಾಣಿಕತನದಲ್ಲಿದ್ದ ಹೆಮ್ಮೆಯೇ, ಈ ಅನರ್ಥಕ್ಕೆ ಕಾರಣವೆಂದು ನನಗೆನಿಸುತ್ತದೆ. ಹಿಂದಿನ ಆಚಾರ ವಿಚಾರ ಗಳಲ್ಲಿ ನಂಬುಗೆಯನ್ನಿಟ್ಟು, ಬಹಳ ಅಕ್ಕರೆಯಿಂದ, ಆದರದಿಂದ ತಮ್ಮ ಮನೆತನದ ಹಿರಿಮೆಯನ್ನು ಕಾದುಕೊಂಡು ಬರುವ ಸ್ಥಿರನಂಬುಗೆ ಅನೇಕ ರನ್ನು ಹುಚ್ಚರನ್ನಾಗಿ ಮಾಡಿರುತ್ತದೆ ಆ ರೀತಿ ಹುಚ್ಚರಾಗಿ ತಮ್ಮ ಮನೆ ತನದ ಕೀರ್ತಿಗೆ ಕಳಂಕಬಾರದೆ ನಡೆದುಕೊಳ್ಳುವ ನಿಷ್ಠೆ ಅವರನ್ನು ಹೊಂದಿ ಕೊಂಡಿರುತ್ತದೆ ಹೀಗೆ ಅವರ ವರ್ತನೆ ನಿಷ್ಕಳಂಕವಾಗಿರುವಾಗ, ಅದನ್ನು ಕಾಯ್ದುಕೊಂಡು, ತಮ್ಮ ವಂಶದ ಗೌರವವನ್ನು ಉಳಿಸಲು, ಇಂತಹ ಸಾಂಪ್ರದಾಯವಂತರು ಯಾವ ಕಾರ್ಯವನ್ನಾಗಲಿ, ಎಂತಹ ಘೋರಕೃತ್ಯ ವನ್ನಾಗಲಿ ಮಾಡುವುದಕ್ಕೆ ಹೇಸುವುದಿಲ್ಲ ಕೆಲವು ಹಳೆಯ ಮನೆಗಳ, ಕುಟುಂಬಗಳ ಜೀವನ ಕ್ರಮವನ್ನು ನೋಡಿದರೆ, ತಮಗೆ ಇದು ವಿದಿತವಾಗು ವುದು ನಿಶ್ಚಯ.

"ಓರ್ವ ಪ್ರಾಮಾಣಿಕನು ತನ್ನ ಸುತ್ತುಮುತ್ತಲಿನ ಜನರಲ್ಲಿ ವಿಶ್ವಾಸ ವಿಟ್ಟು, ನಂಬುಗೆಯಿಂದ ಜೀವಿಸುವವನು, ಯಾವಾಗಲೂ ಸರಿಯಾದ ಮಾರ್ಗವನ್ನೇ ಅನುಸರಿಸುವನೆಂದು ಹೇಳಲಾಗದು. ಇತರರನ್ನು ನಂಬಿ ದಾಗ, ಅವರಲ್ಲಿ ವಿಶ್ವಾಸವಿಟ್ಟು ವರ್ತಿಸುವಾಗ, ಸ್ವಲ್ಪ ಮಟ್ಟಿಗೆ ಎದುರಿನವರು ಮೋಸಮಾಡಿದರೂ ಅದು ಅವನಿಗೆ ಗೋಚರವಾಗದಿರುವುದು ಸಹಜವೇ. ಯಾವನು ತಮ್ಮ ಸಂಗಡಿಗರನ್ನು ನಂಬುವನೋ ಅವನ ಅಂತಃಚಕ್ಷುಗಳು ಪೂರ್ತಿ ತೆರೆದಿರುವುದಿಲ್ಲ. ಮುಗ್ಧರಂತೆ ಇವನ ವರ್ತನೆಯು, ನೋಡುವವ ರಿಗೆ ಕಲುಷಿತವೆನಿಸುವುದು ನಿರ್ಮಲ ಹೃದಯಿಗಳಾದ ಇಂತಹ ಮುಗ್ಧರ ಮನಸ್ಸನ್ನು ಪೂರ್ತಿಯಾಗಿ ತಿಳಿಯುವ ತಾಳ್ಮೆ, ನಮ್ಮಲ್ಲಿರುವುದಿಲ್ಲ. ಹೊರ ಗಿನಿಂದಲೇ ಬೇರೆಯವರ ಜೀವನದಲ್ಲಿಯ ತಪ್ಪುಗಳ ಕಡೆ ಬೆರಳುಮಾಡಿ ತೋರಿಸಿ, ಅವುಗಳನ್ನು ಪ್ರಮಾದವೆಂದು ಭಾವಿಸಿ, ಬಯಲಿಗೆಳೆದು ಅವ ಮಾನಗೊಳಿಸುವ ಮನಸ್ಸುಳ್ಳ ನಮ್ಮ ವರ್ತನೆ ಹೇಯವೆನಿಸಿದರೂ, ಸಮಾಜ ದಲ್ಲಿ ಈ ರೀತಿ ಸಂಭಾವಿತರೆಂದೆನಿಸಿಕೊಂಡವರನ್ನು ಯಾರು ದಂಡಿಸುವರು? ಸಾಮಾನ್ಯರಾದ ಇಂಥವರ ಪ್ರಾಮಾಣಿಕ ಜೀವನಕ್ಕೆ ಬೆಲೆ ಇರುವದೇ? ಕೃತ್ರಿಮಜೀವನ ನಡೆಸುವ ನಮ್ಮ ಹೃದಯಗಳು, ದಯೆಯೆಂಬ ನೀರಿಲ್ಲದ

ಸರೋವರದಂತೆ ಬತ್ತಿಹೋಗುವವು. ನಿಮ್ಮ ಮುಂದೆ ದೋಷಿಯಾಗಿ ನಿಂತಿರುವ ಇವನು, ನಿಜವಾಗಿಯೂ ಸಂಪನ್ನನಿದ್ದರೂ ಸಮಾಜದಲ್ಲಿ ಇವನಿಗೆ ಸ್ಥಾನಮಾನಗಳಿಲ್ಲದ ಮೂಲಕ, ಇವನನ್ನು ಯಾರು ನಂಬುವರು? ಇವನ ವಿಶ್ವಾಸನೀಯವಾದ ಮಾತುಗಳನ್ನು ಯಾರು ಲಕ್ಷಿಸುವರು? ಸಮಾಜದ ಅಜ್ಞಾನಕ್ಕೆ ಇಂತಹ ಮುಗ್ಧರು ನಿರಾಯಾಸವಾಗಿ, ಅನ್ಯಾಯವಾಗಿ ಬಲಿಯಾದರೆ, ಅದೆಂದಿಗೂ ಆಶ್ಚರ್ಯವಲ್ಲ. ಈ ಬಗೆಯ ಜೀವನದಲ್ಲಿ ಇಂತಹ ಅನ್ಯಾಯಗಳಾಗುವುದು ಸಹಜವೇ ಕರ್ತವ್ಯ ಕರ್ತವ್ಯವೆಂದು, ಹೆಮ್ಮೆಯ ಮಾತುಗಳನ್ನಾಡುವ ನಮಗೆ, ನಿರ್ಮಲ ಹೃದಯಗಳ ಆರ್ತನಾದವನ್ನು ಕೇಳುವ ತಾಳ್ಮೆ ಇರುವುದಿಲ್ಲ ತಪ್ಪು ಮಾಡದಿದ್ದರೂ, ಇಂಥವರೇ ದೋಷಿಗಳೆಂದು ತಪ್ಪುಅವರ ಮೇಲೆ ಹಾಕಿ, ಪಾರಾಗುವುದೇ ಸರಿಯಾಧ ಮಾರ್ಗವೆನಿಸುವುದು. ಕುರುಡು ಸಮಾಜವು ಇಂಥವರನ್ನು ದಂಡಿಸುವುದು; ದೋಷಿಗಳನ್ನು ಹೊಗಳುವುದು. ಇದು ಲೋಕದಲ್ಲಿ ನಡೆಯುವ ನ್ಯಾಯವಿಧಾನದ ರೀತಿ. ತಪ್ಪನ್ನೇ ಒಪ್ಪೆಂದು ಭಾವಿಸುವ ಮೂಢತನ ನಮ್ಮಲ್ಲಿರುವವರೆಗೂ ಇಂತಹ ಅನ್ಯಾಯಗಳಿಗೆ ಕೊನೆ ಮೊದಲಿಲ್ಲವೆನ್ನಬಹುದು. ಅಹಂಭಾವ, ಅಸೂಯೆ, ಅಪ್ರಾಮಾಣಿಕತೆಗೆ ನೆಲೆವೀಡಾದ ನಮ್ಮ ಕಲುಷಿತ ಹೃದಯಗಳಿಗೆ ಇಂತಹ ನಿರ್ಮಲ ಹೃದಯಗಳ ಬೆಲೆ ತಿಳಿಯುವುದಾದರೂ ಹೇಗೆ?

"ಇರಲಿ. ಈ ವೇದಾಂತವನ್ನು ಇಲ್ಲಿಗೆ ನಿಲ್ಲಿಸಿ, ಇವನ ಜೀವನ ಚಿತ್ರವನ್ನು ಸ್ವಲ್ಪಮಟ್ಟಿಗೆ ವಿವರಿಸುವೆ:

"ಇವನ ಮನೆತನ ಸಾಮಾನ್ಯ ರೀತಿಯದು. ಆದರೂ ಇವನ ಆರೈಕೆಯಲ್ಲಿ ಯಾವ ಕೊರತೆ ಇರಲಿಲ್ಲ ಒಳ್ಳೆಯ ರೀತಿಯಲ್ಲಿ ಇವನನ್ನು ಮನೆಯವರು ಬೆಳೆಸಿದರು. ಒಳ್ಳೆಯದು, ಕೆಟ್ಟದು, ಇವೆರಡರ ತಾರತಮ್ಯ ಇವನಿಗೆ ವಿವರವಾಗಿ ತಿಳಿದಿದ್ದಿತು ದಿನದಿಂದ ರಾತ್ರಿಯನ್ನು ಹೇಗೆ ವಿಂಗಡಿಸಬಹುದೋ. ಅದೇ ರೀತಿಯಲ್ಲಿ ಒಳ್ಳೆಯದನ್ನು ಕೆಟ್ಟ ಕಾರ್ಯದಿಂದ ಬೇರೆಯಾಗಿಸಬಹುದೆಂದು ಇವನು ಭಾವಿಸಿದ್ದನು ಒಳ್ಳೆಯದರಲ್ಲಿಯೆ ಇವನಿಗೆ ಆಸಕ್ತಿ ಹೆಚ್ಚು. ಯಾವಾಗಲೂ ಒಳ್ಳೆಯ ಕೆಲಸವನ್ನಾಗಲಿ, ಇತರರಿಗೆ ಸುಖಬಯಸುವುದೆಂದರಾಗಲಿ, ಇವನಿಗೆ ಅಮಿತ ಪ್ರೀತಿ.

"ಇವನದು ಶ್ರೀಮಂತ ಮನೆತನವಲ್ಲ. ಆದುದರಿಂದ ಬಡವರು,

ದೀನರೆಂದರೆ ಇವನಿಗೆ ಕನಿಕರ, ಪ್ರೀತಿ ಹೆಚ್ಚು. ಯಾವಾಗಲೂ ನಿಯಮಿತ ರೀತಿಯಲ್ಲಿ ನಡೆಯುವುದು, ಹುಮ್ಮಸದಿಂದ ಕೆಲಸ ಮಾಡುವುದು, ಧೈರ್ಯ ದಿಂದ ಮುಂದುವರಿಯುವುದು, ದೈವಭಕ್ತಿಯುತನಾಗಿ ನಿಜವನ್ನಾಡುವುದು, ಇವುಗಳೇ ಇವನ ಜೀವನದಲ್ಲಿ ಕಾಣಬರುವ ಅಂಶಗಳಾಗಿದ್ದವು. ಇವನ, ಇಪ್ಪತ್ತೆರಡರ ವಯಸ್ಸಿನಲ್ಲಿ ಮದುವೆಯಾಯಿತು ಅವಳು ಸುಗುಣಿ; ಇವ ನಂತೆಯೇ ಸಂಭಾವಿತ ಮನೆತನದಲ್ಲಿ ಬೆಳೆದವಳು. ತನ್ನ ಗುಣಗಳಿಗೆ ಅನುವಾಗಿ, ನಡೆದುಕೊಳ್ಳುವ ಮನಸ್ಸುಳ್ಳ, ಸಂಗಾತಿಯು ದೊರೆತುದು ಇವನಿಗೆ ಸಂತೋಷವೆನಿಸಿತು. ಯಾವ ಬಗೆಯ ಆಡಂಬರಗಳಿಗೆ ಮೋಹ ಗೊಳ್ಳದ ಅವಳ ಸಾಮಾನ್ಯ ಜೀವನ ಇವನಿಗೆ ರುಚಿಸಿತು. ಹೆತ್ತ ತಾಯಿ ಯನ್ನು ದೇವರೆಂದು ಪೂಜ್ಯಭಾವನೆಯಿಂದ ಆರಾಧಿಸುವದು ಇವನ ಸಹಜ ಸ್ವಭಾವ. ಹೆಣ್ಣೆಂದರೆ, ಇವನಿಗೆ ಗೌರವ

"ಮನೆಯವರು ಸಂಭಾವಿತರು, ಮನೆಯಾಕೆ ಸಾಧ್ವಿ, ಎಲ್ಲರೂ ಸತ್ಪ್ರ ವರ್ತಕರು. ನಿರ್ಮಲ ವಾತಾವರಣದಲ್ಲಿ ಬೆಳೆದ ಇವನಿಗೆ ಸುಳ್ಳು, ಮೋಸ, ಕುಹಕವೆಂಬುದು ಹೊಸತು. ಇವುಗಳೆಂತಹವೆಂಬುದನ್ನೇ ಅರಿಯನು. ಲಗ್ನವಾಗುವುದಕ್ಕೆ ಮುನ್ನ ಲಾಂಗ್ಲಾಸನೆಂಬುವನ ಕಛೇರಿಯಲ್ಲಿ ನಗದೀ ಗುಮಾಸ್ತನಾಗಿ ಕೆಲಸಕ್ಕೆ ಸೇರಿದ್ದನು ತನ್ನ ಜೀವನವನ್ನು ಸುಖವಾಗಿ ಸಾಗಿಸಲು ಅನುವಾದ ಈ ಲಾಂಗ್ಲಾಸನನ್ನೇ ಕೊಲೆ ಮಾಡಬೇಕಾದರೆ, ಅಸಮಾನ್ಯ ಕಾರಣಗಳಿರಬೇಕೆಂದು ನನಗೆನಿಸುತ್ತದೆ. ಹೀಗೆ ಉತ್ತಮ ಕುಲದಲ್ಲಿ ಜನಿಸಿ, ಸುಸ್ವಭಾವದ ವಾತಾವರಣದಲ್ಲಿ ಬೆಳೆದು, ಕೆಟ್ಟದೇ ನೆಂಬುದರ ಕಲ್ಪನೆಯೇ ಇಲ್ಲದ ಇವನಿಗೆ, ತನ್ನ ಯಜಮಾನನ್ನು ಕೊಲೆ ಮಾಡುವ ಯೋಚನೆ ಬರಬೇಕಾದರೆ, ಪ್ರಬಲವಾದ ಕಾರಣಗಳಿರಬೇಕಾ ದುದು ನ್ಯಾಯವೂ ಮತ್ತು ಸ್ವಾಭಾವಿಕವೂ ಎಂದು ನಾನು ಭಾವಿಸುತ್ತೇನೆ. ನೀವು ಈ ವಿಷಯವನ್ನು ಮುಖ್ಯವಾಗಿ ನೆನಪಿನಲ್ಲಿಡಬೇಕೆಂದು ನನ್ನ ನಮ್ರ ಸೂಚನೆ.

"ನಿಮ್ಮ ಮುಂದೆ ಸಾಕ್ಷಿಯನ್ನಿತ್ತವರ ವಿಷಯಗಳನ್ನು ಗಮನಿಸಿದರೆ, ನಿಕೋಲೆಸ್ ಲೂಗೇರ್ ಎಂತಹವನೆಂಬುದು ನಿರ್ಣಯವಾಗಿರುವುದು. ಅವನು ಅತ್ಯಂತ ಪ್ರಾಮಾಣಿಕನೆಂದೂ, ಯಾರನ್ನೂ ದ್ವೇಷಿಸಿಲ್ಲವೆಂದೂ

ವಿದಿತವಾಗುತ್ತದೆ. ಲಾಂಗ್ಲಾಸ್ ಬ್ಯಾಂಕಿನ ನೌಕರರೆಲ್ಲರೂ ಇವನು ಒಳ್ಳೆಯವನೆಂದು ಹೇಳಿರುವರು. ಇದರಿಂದ ಇವನು ಒಳ್ಳೆಯ ನಡತೆಯವನೆಂದೂ ನಿಶ್ಚಯವಾಗಿರುವುದು.

" ಇವನ ಜೀವದ ಗೆಳತಿ ಟೈಫಾಯಿಡ್ ಬೇನೆಯಿಂದ ಕಾಲವಾದಳು. ಹತ್ತು ವರುಷ ಇವನೊಂದಿಗೆ ಇದ್ದು, ಸುಖದುಃಖಗಳಲ್ಲಿ ಭಾಗವಹಿಸಿ, ಸನ್ಮಾರ್ಗವರ್ತಿನಿಯಾದ ಇವಳ ಮರಣದಿಂದ ಅತೀವ ನೋವು ಉಂಟಾಯಿತು. ಯಾವಾಗಲೂ ತನ್ನವಳನ್ನು ನೆನೆಯುತ್ತ, ಮೌನದಲ್ಲಿ ತನ್ನ ಕೆಲಸ ನಿರ್ವಹಿಸುವುದೇ ಇವನ ದಿನದ ಕಾರ್ಯಕ್ರಮವಾಗಿತ್ತು. ಯಾರಿಗೂ ಕೇಡು ಬಗೆಯುವ ಸ್ವಭಾವ ಇವನದಾಗಿದ್ದಿಲ್ಲ.

" ಹತ್ತು ವರುಷ ಇವಳ ಜತೆಯಲ್ಲಿ ಕಳೆದ ಜೀವನ ಆದರ್ಶಮಯವಾಗಿದ್ದಿತೆನ್ನಬಹುದು ಅವಳಿಲ್ಲದ ಜೀವನ ಬೇಸರವೆನಿಸಿತು ಮನೆಗೆ ಬಂದೊಡನೆ ನಗುಮುಖದಿಂದ ಮನೆಯನ್ನು ಸಂತೋಷದಲ್ಲಿ ಮುಳುಗಿಸುವ ಅವಳ ನಡತೆ ಇವನಿಗೆ ಜೀವನದಲ್ಲಿ ಹುರುಪನ್ನು ತಂದೊಡ್ಡಿತು ತಾಯಿಯ ಮಮತೆಯಿಂದಲೂ, ಸ್ತ್ರೀಯಳ ಸಹಜ ಕೋಮಲತೆಯಿಂದಲೂ, ಸ್ನೇಹಿತಳ ಸರಳತೆಯಿಂದಲೂ ಸಂತೈಸುತ್ತ ನೆರವಾದ ಅವಳ ಅಗಲಿಕೆಯಿಂದ ಇವನ ವಿರಹದುಃಖ ಇಮ್ಮಡಿಯಾಗಿದ್ದಿತು

" ಒಂಟಿಗನಾಗಿ ಜೀವಿಸುವುದು ಅಸಾಧ್ಯವೆನಿಸಿತು. ಬೇಸರವನ್ನು ಮರೆಯಲು ದಿನವೂ ಸಂಜೆ, ಊರಲ್ಲಿ ಹೆಸರಾದ ಪಾನೀಯದಂಗಡಿಯಲ್ಲಿ ಒಂದೆರಡು ಗಂಟೆ ಕಾಲ ಕಳೆಯುತ್ತಿದ್ದನು. ಒಂದೆರಡು ಲೋಟಾ ಪಾನೀಯವನ್ನು ಸೇವಿಸಿ, ಅಲ್ಲಿ ನಡೆಯುತ್ತಿದ್ದ ಆಟಪಾಟಗಳನ್ನು ನೋಡುತ್ತ ಕುಳ್ಳಿರುವುದು ಇವನ ರೂಢಿಯಾಗಿತ್ತು ಆ ಕ್ರೀಡಾಸ್ಥಳದಲ್ಲಿ ನಡೆಯುವ ಅನೇಕ ಬಗೆಯ ಆಟಪಾಟಗಳನ್ನು ಮೌನದಲ್ಲಿ ನೋಡುವುದರಲ್ಲಿಯೇ ಸಂಜೆಯೆಲ್ಲವನ್ನೂ ಕಳೆಯುತ್ತಿದ್ದನು. ಅಲ್ಲಿ ನಡೆಯುತ್ತಿದ್ದ ಬಿಲಿಯರ್ಡ್ಸ್ ಆಟವನ್ನು ನೋಡುತ್ತಿದ್ದನು. ಆಟಗಾರರ ಆವೇಶಪರ ಮಾತುಗಳ ಕಡೆ ಅವನ ಲಕ್ಷ್ಯವಿರುತ್ತಿತ್ತು. ಕೆಲಸಕ್ಕೆ ಬಾರದ ಇವರ ತಲೆಹರಟೆ, ಇವನಿಗೆ ಬೇಸರವನ್ನುಂಟುಮಾಡುತ್ತಿತ್ತು. ಮಾಡುವುದಕ್ಕೇನೂ ಕೆಲಸವಿಲ್ಲದೆ ಕೆಲ ಸಮಯ ಸ್ವಲ್ಪ ನಿದ್ದೆ ಮಾಡುವುದೂ ರೂಢಿಯಾಗಿತ್ತು ಇವನ ಈ ಮೌನವರ್ತನೆಯ

ಹಿಂದೆ, ಅವನ ಮನಸ್ಸು ಓರ್ವ ಸಂಗಾತಿಯ ಸಹವಾಸವನ್ನು ಹೆಚ್ಚಿನ ಆಸಕ್ತಿಯಿಂದ ಬಯಸುತ್ತಿತ್ತು. ಈ ಅಭಿಲಾಷೆಯನ್ನು ಸಂಕೋಚದಿಂದ ಹೊರಗೆ ಸೂಚಿಸಲಾರದ ಇವನ ಮನೋವೇದನೆ, ಅವನ ಮೌನ ಮುಖ ದಲ್ಲಿಯೂ ಕೂಡ ಆಗಾಗ ವ್ಯಕ್ತವಾಗುತ್ತಿತ್ತು ಅವನು ಆಶಾಪೂರಿತ ದೃಷ್ಟಿ ಯಿಂದ ಹೆಂಗಳೆಯರನ್ನು ನೋಡುವ ರೀತಿ, ಅವರ ಹತ್ತಿರವೇ ನಿಂತು ಕಾಲ ಕಳೆಯುವ ಅವನ ವರ್ತನೆ, ದೂರದಲ್ಲಿ ಹೆಂಗಳೆಯರು ಗಟ್ಟಿಯಾಗಿ ಮಾತ ನಾಡುತ್ತಿದ್ದರೆ, ಅದನ್ನೇ ಕಿವಿಗೊಟ್ಟು ಲಾಲಿಸುವ ಪದ್ಧತಿ, ಇವನ ಹೃದಯ ದಲ್ಲಿಯ ವೇದನೆಯನ್ನು ಹೇಳುತ್ತಿದ್ದವು. ಆ ಅಂಗಡಿಯಲ್ಲಿ ಮೇನೇಜರಳು ಕೂತಿದ್ದೆಡೆಗೆ ಸ್ವಲ್ಪ ಹೊತ್ತು ಹೋಗಿ ನಿಲ್ಲುವುದು, ಒಂದೆರಡು ಸವಿಯ ಮಾತುಗಳನ್ನಾಡುವುದು, ಆಕೆಯಲ್ಲಿ ಇವನ ಪ್ರೀತಿ ನೆಲೆಸುವಂತೆ ಮಾಡಿ ತೆಂದು ಹೇಳಬಹುದು.

“ಮಾತಿನಿಂದ ಮೊದಲಾದ ಇವರ ಪರಿಚಯು, ಕ್ರಮೇಣ ಪ್ರೀತಿ ಯಲ್ಲಿ ಕೊನೆಗಂಡಿತು. ಸಂಜೆ ಸಮಯ ಪೂರ್ಣ ಇವಳ ಹತ್ತಿರವೇ ಇರು ತ್ತಿದ್ದ. ಅವಳ ಮನಮೋಹಕ ಮಾತುಕತೆಗಳಲ್ಲಿ ಇವನಿಗೆ ಆಸಕ್ತಿ ಹೆಚ್ಚಿತು. ಇವಳನ್ನು ಇಷ್ಟು ಹೆಚ್ಚು ಪ್ರೀತಿಸಿದರೂ, ಇವಳ ಪೂರ್ವ ಇತಿಹಾಸವನ್ನು ತಿಳಿಯುವ ಹವ್ಯಾಸಕ್ಕೆ ಅವನು ಹೋಗಲಿಲ್ಲ ಇವಳ ಚೆಲುವು, ಸಲುಗೆ ಯಿಂದ ತೋರಿದ ಮಮತೆ, ಇವನನ್ನು ಮೂಕನನ್ನಾಗಿಸಿದುವು.

“ಇಂತಹ ಕಪಟರಹಿತ ಪುರುಷನಲ್ಲಿ ಇವಳು ಪ್ರೀತಿಯನ್ನು ತೋರಿ, ಅವನೊಂದಿಗೆ ಸ್ನೇಹಬೆಳಿಸಿ, ತನ್ನ ಕಾರ್ಯಸಾಧನೆಗೆ ಅನುಕೂಲವಾಗಲು ಈ ನೀಚ ಸ್ತ್ರೀಯು ಇವನನ್ನು ಮದುವೆಯಾದಳು ಇವಳು ಇತರರೊಂದಿಗೆ ನಡೆಸುತ್ತಿದ್ದ ಪ್ರೇಮವ್ಯವಹಾರದ ಗುಟ್ಟು ಹೊರಬೀಳಬಾರದೆಂಬ ಹಂಚಿಕೆ ಯಿಂದ ಇವನ ಪತ್ನಿಯಾದಳೆಂಬ ಅಂಶ, ಮುಖ್ಯವೆಂದು ನನ್ನ ಮತ.

“ಇಲ್ಲಿ ಮತ್ತೊಂದು ವಿಷಯ ನಾನು ಸೂಚಿಸಬಯಸುತ್ತೇನೆ. ಬೆಡಗು ಬಿನ್ನಾಣದಿಂದ ಅನೇಕ ಯುವಕರನ್ನು ತನ್ನ ಜಾಲದಲ್ಲಿ ಬೀಳುವಂತೆ ಮಾಡಿ, ಮೋಸಪಡಿಸಿದ ಇವಳು, ಇವನೊಂದಿಗೆ ಮದುವೆಯಾಗಿ ತನ್ನ ಕೆಟ್ಟ ವ್ಯಭಿ ಚಾರಮಯ ಜೀವನ ರಹಸ್ಯವನ್ನು ಹೊರಗಿನವರಿಗೆ ತಿಳಿಯಬಾರದೆಂಬ ಮೋಸದ ಅಭಿಪ್ರಾಯದಿಂದ, ಈ ರೀತಿ ವರ್ತಿಸಿದುದು ನಿಕೋಲೆಸ್

ಲೂಗೇರನಿಗೆ ತಿಳಿದಿರಲಿಲ್ಲ. ಅವನೊಬ್ಬ ಮುಗ್ಧ ಜೀವಿ. ಜಗತ್ತಿನ ಮೋಸ, ಲೋಪ, ಪಾಪ ಕಾರ್ಯಗಳನ್ನು ಏನೂ ಅರಿಯ. ಇಂತಹ ಇವನನ್ನು, ಮೊದಲನೆಯ ಹೆಂಡತಿಯ ಮರಣಾನಂತರ ಯಾವ ಹೆಣ್ಣಾದರೂ ಸುಲಭ ವಾಗಿ ಮೋಸಮಾಡಬಹುದಾಗಿತ್ತು ಇವಳು ಗುಪ್ತವಾಗಿ ಅಂಗಡಿಯಲ್ಲಿದ್ದ ಪ್ರತಿಯೊಬ್ಬನಿಗೂ ಶರೀರ ಸುಖವನ್ನಿತ್ತು, ತನ್ನ ಕಾಮದಾಹವನ್ನು ಶಮನ ಮಾಡಿಕೊಳ್ಳುತ್ತಿದ್ದಳು. ಈ ವ್ಯವಹಾರ ಪರಸ್ಪರ ತಿಳಿಯದಂತೆ, ಗುಟ್ಟಾಗಿ ಉಳಿಯುವಂತೆ ವರ್ತಿಸಿದ ಇವಳ ನಡತೆ ಮತ್ತು ಜಾಣ್ಮೆ, ಇವಳೆಂತಹ ಸಾಹಸಿಯೆಂಬುದು ವ್ಯಕ್ತವಾಗುತ್ತದೆ. ಇದಕ್ಕೆ ಸಾಕ್ಷಿ, ಪುರಾವೆಗಳಿವೆ. ಒಂದು ದಿನ ಇವಳ ಈ ರಹಸ್ಯ ಪಾಪಮಯ ಜೀವನದ ಗುಟ್ಟು ಹೊರಬಿದ್ದಿತು. ಆದರೆ ಇವನ ಕಿವಿಯವರೆಗೆ ಅದು ಹೋಗದಂತೆ ನೋಡಿಕೊಂಡಳು.

"ಕೊನೆಗೊಂದು ದಿನ ಅಂಗಡಿಯ ಯಜಮಾನನ ಹತ್ತೊಂಬತ್ತು ವರುಷದ ಮಗನು, ಇವಳ ಬಲೆಯಲ್ಲಿ ಬಿದ್ದನು. ಯಜಮಾನನು ಇದನ್ನು ಕಂಡುಹಿಡಿದು ಅವನನ್ನು ಕರೆದು ದಂಡಿಸಿದನು ಲೂಗೇರನನ್ನು ಕೆಲಸ ದಿಂದ ತೆಗೆದುಹಾಕಿದನು ಯಜಮಾನನು ಆಸ್ಪತ್ರೆಯಲ್ಲಿ ಸಾಯುವಾಗ ಕೊಟ್ಟ ಹೇಳಿಕೆಯ ಬಗ್ಗೆ, ಕೋರ್ಟಿನಲ್ಲಿರುವ ಕಾಗದ ಪತ್ರಗಳೇ ಹೀಗೆ ಹೇಳುತ್ತವೆ, ಗಮನಿಸಬೇಕು ಅವನ ಕೊನೆಯ.ಹೇಳಿಕೆ ಹೀಗಿದೆ:

"ಅಂದು ರಾತ್ರಿ ನನ್ನ ಮಗನು ಈ ನೀಚ-ಸ್ತ್ರೀಯಳಿಗೆ ಹತ್ತು ಸಾವಿರ ಫ್ರಾಂಕುಗಳನ್ನು ಕೊಟ್ಟಂತೆ ತಿಳಿದುಬಂತು ನನಗ ಕೋಪ ಬಂದು ನಿಕೋಲೆಸ್ ಲೂಗೇರನನ್ನು ಮಾರನೆಯ ದಿನ ಮುಂಜಾನೆ ಕರೆದು, ಅವನನ್ನು ಕೆಲಸದಿಂದ ತೆಗೆದುಹಾಕಲ್ಪಟ್ಟಿದೆಯೆಂದು ಹೇಳಿದೆ ನನ್ನ ಮಾತುಗಳನ್ನು ಅವನು ಶಾಂತಚಿತ್ತದಿಂದ ಕೇಳಿಕೊಂಡು, ಇದರ ಕಾರಣವನ್ನು ತಿಳಿಯ ಬಯಸಿದ. ಅದು ಬಹಳ ಗೂಢ ವಿಚಾರವಾದುದರಿಂದ ಹೇಳುವುದಿಲ್ಲವೆಂದೆ. ತನ್ನ ಶೀಲದ ಬಗ್ಗೆ ಕಳಂಕ ಬರುವುದರಿಂದ, ಇದರ ಕಾರಣ ತಿಳಿಸಲೇ ಬೇಕೆಂದು ಒತ್ತಾಯಪಡಿಸಿದ ನಾನು ಸುಮ್ಮನಿದ್ದೆ. ಅವನಿಗೆ ಸಿಟ್ಟುಬಂತು. ತಾಳ್ಮೆ ಮೀರಿ ಒದರತೊಡಗಿದ. ಗಟ್ಟಿಯಾಗಿ ಒದರುತ್ತ ಕಾರಣ ಕೊಡಲೇ ಬೇಕೆಂದು ಚೀರಿಕೊಂಡ ಆದರೂ ಸುಮ್ಮನಿದ್ದೆ. ಮತ್ತೆ ಸಿಟ್ಟಿಗೆದ್ದು ರೋಷ ದಿಂದ ಬೈಗಳಮಳೆ ಸುರಿಸಲಾರಂಭಿಸಿದಾಗ, ಇನ್ನು ಸುಮ್ಮನಿರುವುದು

ಒಳಿತಲ್ಲವೆಂದು ತಿಳಿದು, ಪರಿಣಾಮ ನೆಟ್ಟಗಾಗಲಿಕ್ಕಿಲ್ಲವೆಂದು ಭಯಗೊಂಡು, ರಹಸ್ಯದ ವಿಷಯವನ್ನು ಹೇಳುವುದೇ ಒಳಿತೆಂದು ನೆನೆದು, ನಡೆದ ವಿಷಯವನ್ನು ವಿವರಿಸಿದೆ. ಉದ್ರೇಕಗೊಂಡ ಅವನ ಮನಸ್ಸು ಹಿಡಿತದಲ್ಲಿರಲಿಲ್ಲ ಅವನೇನು ಮಾಡುತ್ತಿರುವನೆಂಬುವುದನ್ನು ತಿಳಿಯುವಷ್ಟು ಸಾವಕಾಶವೂ ಇರಲಿಲ್ಲ. ಅಲ್ಲಿ ಮೇಜಿನ ಮೇಲಿದ್ದ, ಚೂರಿಯನ್ನು ತೆಗೆದುಕೊಂಡು ನನ್ನ ಮೈಮೇಲೆ ಹುಲಿಯಂತೆ ಹಾರಿದ ನನ್ನ ಕುತ್ತಿಗೆಯಲ್ಲಿ ಒಂದು ಚೂಪಾದ ಆಯುಧ ಚುಚ್ಚಿಕೊಂಡಂತೆನಿಸಿತು. ಅಷ್ಟೇ ನನಗೆ ನೆನಪು.'

ವಕೀಲನ ಕೊನೆಯ ಮಾತುಗಳು ಹೀಗಿದ್ದವು:

"ನ್ಯಾಯವನ್ನು ಪರೀಶೀಲಿಸಲು ಕುಳಿತ ಮಹಾಶಯರೇ, ಇದುವೇ ಈ ಆರೋಪಿಯು ನಡೆಸಿದ ಕೊಲೆಯ ಇತಿಹಾಸ. ಆರೋಪಿಯ ಪರವಾಗಿ ಇನ್ನೇನು ಹೇಳಲಿ? ಎರಡನೆಯ ಹೆಂಡತಿಯ ಮೇಲೆ ಅವನಿಗಿದ್ದ ಮೂಢ ನಂಬಿಕೆ, ಮೊದಲನೆಯ ಹೆಂಡತಿಯ ಮೇಲಿದ್ದ ಅವನ ವಿಶ್ವಾಸವೇ ಅವನಲ್ಲಿ ನಮಗೆ ಕಾಣುವ ಗುಣಗಳೆಂದು ಕೊನೆಯದಾಗಿ ಹೇಳಬಯಸುತ್ತೇನೆ "

ಜೂರಿಯವರೊಂದಿಗೆ ಗೋಪ್ಯವಾಗಿ ಚರ್ಚೆ ನಡೆಸಿ, ನ್ಯಾಯಾಧೀಶನು, ಆರೋಪಿಯು ನಿರ್ದೋಶಿಯೆಂದು ತೀರ್ಮಾನ ಹೇಳಿದನು.

( —Assassin )

# ಚಿತ್ರಗಾರನ ಹೆಂಡತಿ

ಜುಲೈ ತಿಂಗಳು, ನಿರ್ಮಲಾಕಾಶದಲ್ಲಿ, ಹೊಳೆಯುವ ಸೂರ್ಯನ ತಾಪ ಹೆಚ್ಚಿರಲಿಲ್ಲ. ಪಂಚಮಿಯ ಅರ್ಧ ಚಂದ್ರಾಕೃತಿಯಂತೆ ಸಮುದ್ರ ತೀರದಲ್ಲಿ ಹಬ್ಬಿಕೊಂಡಿದ್ದ ಎಟ್ರೇಟ ನಗರವು ಬಹು ಸುಂದರವಾಗಿತ್ತು. ಹಗಲಾದರೂ ಅದು ಮಲಗಿ ನಿದ್ರಿಸುವಂತಿತ್ತು. ನಗರದ ಎರಡು ಕೊನೆಗಳಲ್ಲಿ ಎತ್ತರವಾಗಿ ನಿಂತಿದ್ದ ಗುಡ್ಡಗಳು, ಊರಿಗೆ ವಿಶಿಷ್ಟ ಶೋಭೆಯನ್ನು ತಂದೊಡ್ಡಿದ್ದವು.

ಸಮುದ್ರ ಸ್ನಾನಕ್ಕೆಂದು ಬಂದ ಅನೇಕ ವಿಲಾಸಿಗಳನ್ನು ನೋಡಲು, ಗುಂಪುಗುಂಪಾಗಿ ಸೇರುವುದು ಇಲ್ಲಿಯ ರೂಢಿ. ಇಲ್ಲಿ ಹಲವಾರು ಸ್ಥಳಗಳನ್ನು ಪ್ರತ್ಯೇಕ ಹೆಸರಿನಿಂದ ಕರೆಯುವುದುಂಟು ಕ್ಯಾಸಿನೋ ಬಯಲು ಬಹಳ ಹೆಸರಾದುದು ಸ್ವಲ್ಪ ಎತ್ತರದ ದಿನ್ನೆಯಿಂದ ನೋಡಿದರೆ, ಅದೊಂದು ಸುಂದರ ಹೂವಿನ ಪೂದೆಯಂತೆ ಕಾಣುತ್ತಿತ್ತು. ಇಲ್ಲಿ ನೆರೆದ ಸುಂದರಿಯರ ಮನಮೋಹಕ ಉಡುಗೆ-ತೊಡುಗೆಗಳೇ ಇದಕ್ಕೆ ಕಾರಣವೆನ್ನಬಹುದು. ಸೂರ್ಯನ ತಾಪವನ್ನು ಮರೆಯಾಗಿಸಲು ಜನರುಪಯೋಗಿಸುತ್ತಿದ್ದ, ರೇಷ್ಮೆಯ ಕೊಡೆಗಳೂ ಇದರ ಶೋಭೆಯನ್ನು ಹೆಚ್ಚಿಸಿದ್ದವು. ನೀರಿನಿಂದ ದೂರ ನಿರ್ಮಿತವಾದ ಕೆಲವು ವಿಶ್ರಾಂತಿ ಗೃಹಗಳ ಮುಂದಿನ ಬಯಲುಗಳಲ್ಲಿ ಅಲಂಕೃತವಾದ ವಿಲಾಸಿಗಳ ತಂಡಗಳ ನೋಟವೂ ಹೆಚ್ಚಿನ ಕಳೆಯನ್ನು ತಂದೊಡ್ಡಿತ್ತು.

ಕಾಲುನಡೆಗೆಂದು ನಿರ್ಮಿತವಾದ ಸಮುದ್ರ ದಂಡೆಯಲ್ಲಿ ವಿಸ್ತಾರವಾದ ಮಾರ್ಗದಲ್ಲಿ ಜೀನ್ ಸಮ್ಮರನೆಂಬ ಪ್ರಖ್ಯಾತ ಚಿತ್ರಗಾರನು, ಪಕ್ಕದಲ್ಲೊಂದು ದಬ್ಬುವ ಗಾಡಿಯಲ್ಲಿ ಕುಳಿತು ತನ್ನ ಹೆಂಡತಿಯೊಡನೆ ಹೋಗುತ್ತಿದ್ದನು. ಅವಳೊಬ್ಬ ಅನುಪಮ ರೂಪವತಿ ಆದರೆ ಆ ಸುಂದರ ಮುಖದಲ್ಲಿ ಉತ್ಸಾಹದ ಕಳೆ ಇರಲಿಲ್ಲ. ಮನೆಯ ಆಳು ಅವಳು ಕುಳಿತ ಕುರ್ಚಿಯನ್ನು ತಳ್ಳುತ್ತಿರಲು, ಆ ಯುವತಿ ತನ್ನ ದೃಷ್ಟಿಯನ್ನು ಕಳೆಯಿಂದ ತುಂಬಿ ತುಳುಕುತ್ತಿರುವ ಆಕಾಶದ ಕಡೆ, ಎವೆ ಇಕ್ಕದೆ ನೋಡುತ್ತಿದ್ದಳು. ಉತ್ಸಾಹದಿಂದ ಆನಂದದಲ್ಲಿ ತಲ್ಲೀನರಾಗಿದ್ದ ಆ ಜನರ ನೋಟ, ಹುರುಪಿನ

ಸೂರ್ಯನ ಬೆಳಕು, ಅವಳ ಮನಸ್ಸಿಗೆ ಯಾವ ಬಗೆಯಾದ ಆನಂದವನ್ನೂ ತಂದುಕೊಟ್ಟಿರಲಿಲ್ಲವೆಂಬುದನ್ನು, ಅವಳ ನಿಸ್ತೇಜವಾದ ಮುಖವೇ ಹೇಳುತ್ತಿತ್ತು

ಆ ದಂಪತಿಗಳು ಮೌನದಿಂದಲೇ ಮುಂದೆ ಸಾಗಿದ್ದರು.

"ಇಲ್ಲಿ ಸ್ವಲ್ಪ ನಿಲ್ಲೋಣ" ಎಂದಳು ಆ ಹೆಂಗಸು.

ಆ ಕಲಾವಿದನು ನಿಂತನು ಮನೆಯ ಆಳು ತಂದುಕೊಟ್ಟ ಪ್ರವಾಸದ ಸ್ಟೂಲನ್ನು ಹೆಂಡತಿಯ ಪಕ್ಕದಲ್ಲಿಯೇ ಇಟ್ಟು, ಅದರ ಮೇಲೆ ತಾನೂ ಕುಳಿತನು

ಅಲುಗಾಡದೆ ಮೌನದಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಆ ದಂಪತಿಗಳ ಕಡೆ, ಜನರು ತಮ್ಮ ಸಹಾನುಭೂತಿಯ ದೃಷ್ಟಿಯನ್ನು ಬೀರಿ ಸಾಗುತ್ತಿದ್ದರು. ಇವರ ಪ್ರಣಯದ ಕತೆ ಎಲ್ಲರಿಗೂ ತಿಳಿದ ವಿಷಯವೇ ಆ ಯುವತಿ, ಕುಂಟಿ ಯಾದರೂ, ಅವಳನ್ನು ಮದುವೆಯಾದುದು, ನಿರ್ಮಲ ಪ್ರೇಮದ ಪರಿಣಾಮ ವೆಂಬುದು ಆ ಊರ ಜನರಿಗೆಲ್ಲರಿಗೂ ತಿಳಿದಿತ್ತು

ಈ ದಂಪತಿಗಳು ಕುಳಿತಿದ್ದ ಸ್ಥಳದಿಂದ ಸ್ವಲ್ಪ ದೂರದಲ್ಲಿ, ಇಬ್ಬರು ಯುವಕರು ಸಮುದ್ರವನ್ನು ಎಡೆಬಿಡದೇ ನೋಡುತ್ತ ಕುಳಿತಿದ್ದರು.

"ನೀನು ಹೇಳುವುದು ಸುಳ್ಳು ಜೀನ್ ಸಮ್ಮರನನ್ನು ನಾನು ಬಲ್ಲೆ. ನನಗವನ ಪರಿಚಯ ಚನ್ನಾಗಿದೆ"

"ಆದರೆ ಅವನೇತಕ್ಕೆ ಇವಳನ್ನು ಮದುವೆಯಾದ? ಮದುವೆಯಾಗು ವಾಗ ಇವಳು ಕುಂಟಿ ಎಂದು ತಿಳಿದಿರಲಿಲ್ಲವೆ?"

"ಈ ವಿಷಯ ಅವನಿಗೆ ತಿಳಿದಿತ್ತು ಪುರುಷನು ಸ್ತ್ರೀಯನ್ನು ಮದುವೆ ಯಾಗುವಂತೆ ಮದುವೆಯಾದ. 'ಇದು ನಿಸರ್ಗದ ನಿಯಮವಲ್ಲವೆ?"

"ಇಷ್ಟಾದರೂ, ಇವಳನ್ನೇ ಮದುವೆಯಾಗಬೇಕಾದರೆ ಮತ್ತೇನೋ ಮಹತ್ವದ ಕಾರಣವಿರಬೇಕು."

"ಕಾರಣ! ಮತ್ತಾವ ಕಾರಣ? ಮರುಳುಗೊಂಡ ಮನುಷ್ಯ, ಕೆಲಸ ಮಯ ಹುಚ್ಚನಂತೆ ಪ್ರವರ್ತಿಸುವನು ಇವನು ಆ ಜಾತಿಗೆ ಸೇರಿದವ. ಚಿತ್ರಕಾರರೂ ಕಲಾವಿದರೂ ಕವಿಗಳೂ, ಸಾಹಿತ್ಯೋಪಾಸಕರೂ ಸಹಜವಾಗಿ ಇಂತಹ ತಪ್ಪುಗಳನ್ನು ಮಾಡುವರು. ತಮ್ಮಲ್ಲಿಯ ಕಲೆಯ ಹುಚ್ಚು

ಅವರನ್ನು ಏನೇನೋ ಮಾಡುವಂತೆ ಮಾಡುತ್ತದೆ ಚಿತ್ರಕಾರರಿಗೆ ಬರೆಯುವ ಉತ್ತಮ ಮಾದರೀ ಸ್ತ್ರೀ ದೊರೆತರೆ ಸಾಕು ಇತರ ವಿಷಯಗಳ ಕಡೆ ಅವರ ದೃಷ್ಟಿ ಹೊರಡುವುದು ಅಪರೂಪ. ಕಲಾವಿದರು ಮಾಡುವ ತಪ್ಪುಗಳೆಂತಹ ವೆಂಬುದಕ್ಕೆ, ನಿಮಗೆ ನಿದರ್ಶನಗಳು ಬೇಕಾದರೆ, ಆಲಪ್ಸಾಂಜೇ ಡಾಡೆಟ ಬರೆದಿರುವ "ಕಲಾವಿದರ ಸತಿಯರು" ಎಂಬ ಪುಸ್ತಕವನ್ನು ಖಂಡಿತವಾಗಿ ನೀನು ಓದಲೇಬೇಕು."

"ಇಲ್ಲಿ ಕುಳಿತಿರುವ ಈ ದಂಪತಿಗಳ ಪ್ರಣಯ ಕತೆಯ ವಿವರಗಳು ವಿಚಿತ್ರವಾದರೂ, ಬಹು ಕರುಣಾಜನಕಗಳೇ ಸರಿ ಇವರ ಜೀವನದ ಕತೆ ಹೇಳಿದರೆ ನಂಬುವಹಾಗಿಲ್ಲ ಸ್ತ್ರೀಯರ ಕೆಲವು ಗುಣಗಳನ್ನು ಚಿತ್ರಿಸುವ ಇವರ ಜೀವನಕತೆಯು ಬಹಳ ಆಶ್ಚರ್ಯಕರವಾಗಿರುತ್ತದೆ ಸ್ತ್ರೀಯರ ಮನಸ್ಸನ್ನು ಅರಿಯುವುದು ಕಷ್ಟ. ಅವರು ತೋರಿಸುವ ಪ್ರೇಮ ನಿಶ್ಚಲವೋ ಕೃತ್ರಿಮವೋ ತಿಳಿಯುವುದು ಬೇಗ ಸಾಧ್ಯವಾಗುವುದಿಲ್ಲ ಅನೇಕ ವೇಳೆ ಅವರ ಮನೋವೃತ್ತಿ, ನಿರ್ಮಲವಾದುದೇ ಆದರೂ, ಅವರ ಚಂಚಲ ಸ್ವಭಾವ ಸಂಶಯಕ್ಕೆ ಗುರಿಮಾಡುತ್ತದೆ ಭಾವಪ್ರಧಾನವಾದ ಅವರ ಹೃದಯ, ಚಿತ್ತ ಚಾಂಚಲ್ಯದಿಂದ ಪ್ರೇರಿತರಾದ ಅವರ ಕೆಲಸಗಳ ನಿಲುವು, ಹೀಗೆಯೇ ಎಂದು ನಿರ್ಧರಿಸುವುದು ಆಗದ ಕೆಲಸ. ವಿವೇಚನೆ ಮಾಡದೆ ಸುಳ್ಳು ಹೇಳುವ ಅವರ ಸ್ವಭಾವ ಅನೇಕರನ್ನು ಗೊಂದಲದಲ್ಲಿ ಕೆಡವಿಬಿಡುವುದು ಅವರ ಅಂತಃಕರಣಗಳು ಮಾತ್ರ, ನಿಷ್ಕಲ್ಮಷವಾಗಿರುವುದೆಂಬುದನ್ನು ಅನೇಕ ವೇಳೆ ಅವರ ಬಾಹ್ಯ ವರ್ತನೆಯಿಂದ ತಿಳಿಯಬಹುದು. ಅವರದು ಬಹು ಅವಸರ ಪ್ರಕೃತಿಯಾದುದರಿಂದಲೂ, ನಿರ್ಣಯಗಳು ಒಂದೇ ರೀತಿಯವೆಂದು ತಿಳಿಯುವುದು ಸುಲಭವಲ್ಲವಾದುದರಿಂದಲೂ, ಅವರ ಜೀವನದ ವಿಷಯಗಳು ಕೊನೆಯವರೆಗೂ ಒಗಟಾಗಿಯೇ ಉಳಿದುಬಿಡುವವು

"ಅನೇಕ ಸಮಯಗಳಲ್ಲಿ ಅವರ ಚರ್ಯೆಗಳಲ್ಲಿ ಸಹಜ ಕೃತ್ರಿಮಗಳೆರಡೂ ಮಿಳಿತವಾಗಿರುವವು. ಹೀಗೆ ಒಗಟಾಗಿರಿಸುವ ಸ್ವಭಾವ ಅವರದೆಂದು ಪುರುಷರು ತಿಳಿದರೂ, ಅನೇಕ ವೇಳೆ ಮೋಸ ಹೋಗುವುದು ಸಹಜ."

"ತಮ್ಮ ಕಾರ್ಯ ಸಾಧನೆಗೆ ಅವರು ವಿನಿಯೋಗಿಸುವ ಸಾಧಕಗಳು ಬಹು ವಿಚಿತ್ರವಾದುವೆನ್ನಬಹುದು. ಏಕಕಾಲದಲ್ಲಿ ನೋಡುವುದಕ್ಕೆ ಅವು

ಸಾಧಾರಣ ರೀತಿಯವೆನಿಸಿದರೂ, ಅವುಗಳು ಅಭೇದ್ಯವಾಗಿಯೇ ಉಳಿಯು ವವು. ಮುಂದಾಗಿ ಊಹಿಸಲು ಎಂದಿಗೂ ಆಸ್ಪದವೇ ಇರುವುದಿಲ್ಲ. ಅವರು ಪುರುಷರ ಮೇಲೆ ಬೀಸುವ ಬಲೆಯ ರೀತಿ-ನೀತಿಯನ್ನು ತಿಳಿಯಲು ಎಂತಹ ನಿಗೂ ಸಾಧಿಸದಂತಹ ಒಗಟವೇ ಸರಿ. ಕೃತ್ರಿಮ ವಾತಾವರಣದಲ್ಲಿ ಬೆಳೆ ದಿರುವ ಇವರ ಜೀವನಕ್ರಮ ಮೋಸ-ಲೋಪ-ದ್ರೋಹಗಳ ನಡುವೆ ನಡೆಯು ತ್ತಿರುವ ನಿತ್ಯಜೀವನ, ಇವರಲ್ಲಿ ಇಂತಹ ಗುಣಗಳು ಏರ್ಪಡುವುದಕ್ಕೆ ಕಾರಣ ವಾಗಿರಬಹುದು ಪುರುಷರು ಅವರ ರೂಪಕ್ಕ ಮೋಹಗೊಂಡು, ಮಾಡಿದ ಅಪರಾಧಕ್ಕೆ ತಕ್ಕ ಫಲ ಅನುಭವಿಸಿಯೇ ತೀರಬೇಕಾಗುವುದು. ಸ್ನೇಹ ಸಲುಗೆ ಬೆಳೆದನಂತರ, ಮುಂದಿನ ಜೀವನ ಸುಖವಾಗಲಿ, ಕಷ್ಟವಾಗಲಿ, ಅನುಭವಿಸಿಯೇ ತೀರಬೇಕಾಗುವುದು ಈ ರೀತಿಯಲ್ಲಿ ಸಂಕಟಕ್ಕೊಳಗಾದ ಇವನ ಕತೆ, ಬಹು ಕರುಣಾಜನಕವಾಗಿದೆ

"ಈ ಸ್ತ್ರೀ ಮೊದಲಿಗೆ ಅನೇಕ ಸಮಯಗಳಲ್ಲಿ ಇವನ ಚಿತ್ರ ಶಾಲೆಗೆ ಬಂದು, ಚಿತ್ರಗಳನ್ನು ಚಿತ್ರಿಸಲು ಅನೇಕ ಭಂಗಿಯಲ್ಲಿ ನಿಲ್ಲುತ್ತಿದ್ದಳು. ಚಿತ್ರ ಕೆಲಸದಲ್ಲಿ ಅವನು ಹೇಳಿದಂತೆ ಕೇಳುತ್ತಿದ್ದಳು ಗಂಟೆಗಳವರೆಗೂ ಯಾವ ರೀತಿಯಲ್ಲಿ ಬೇಕಾದರೂ ಕುಳಿತು, ಒಳ್ಳೊಳ್ಳೆಯ ಚಿತ್ರಗಳನ್ನು ಚಿತ್ರಿಸಲು ಸಹಾಯಕಳಾಗುತ್ತಿದ್ದಳು. ಚಿತ್ರಗಾರನ ಹೃದಯವನ್ನರಿತು, ಅವನ ಚಿತ್ರ ಣದ ಕೆಲಸದಲ್ಲಿ ಬೇಕಾದ ಭಂಗಿಯಲ್ಲಿ ಕುಳಿತುಕೊಳ್ಳುವ ಅವಳ ತಾಳ್ಮೆ, ಜಾಣತನ, ಮತ್ತು ಅವಳ ಅನುಪಮ ಸೌಂದರ್ಯ, ಇವುಗಳ ಮೂಲಕ ಅವಳು ಅವನಿಗೆ ಬೇಕೆನಿಸಿದಳು. ಅವನು ಯುವಕ; ಇವಳು ಯುವತಿ. ಯಾವಾಗಲೂ ಹತ್ತಿರವೇ ಇರುವ ಅವಕಾಶ. ಇಂತಹ ಚೆಲುವೆಯ ನೆರವು ತನ್ನ ಕಲೋಪಾಸನೆಗೂ. ಜೀವನ ಕ್ರಮಕ್ಕೂ ನೆರವಾಗುತ್ತಿರುವಾಗ ಯಾವ ಪುರುಷನು ಈ ಅವಕಾಶವನ್ನು ಕಳೆದುಕೊಳ್ಳುವನು? ಇದು ಆ ಮುಗ್ಧೆ ನೀಡಿದ ಬಲೆಯಲ್ಲ. ಸತ್ತೆಂಟು ತಿಂಗಳುಗಳು ಹತ್ತಿರವೇ ಬಿದ್ದು, ಒಬ್ಬರ ನ್ನೊಬ್ಬರು ತಿಳಿದುಕೊಂಡು ವರ್ತಿಸಿದುದರ ಫಲಿತಾಂಶ ಈ ಸಂಬಂಧವು ಕಾಮೇಚ್ಛೆಯಲ್ಲಿಳಿದ ನಂತರ, ಅದೇ ಸ್ತ್ರೀ ಅವನಿಗೆ ಬೇಡಾಗುವಳು ಇದರ ಕಾರಣವಿಷ್ಟೇ. ಮಾನವನು ಓರ್ವ ಸ್ತ್ರೀಯನ್ನು ಪ್ರೀತಿಸುವಾಗ, ಅದರ ಕಾರಣ ಅವಳ ಬಾಹ್ಯರೂಪ ಲಾವಣ್ಯಗಳು ಅಲ್ಲದೆ, ಅವಳ ಮತ್ತು ತನ್ನ

ಹೃದಯಗಳ ಪರಸ್ಪರ ಪರಿಚಯದ ಪರಿಣಾಮದ ಫಲವಾದ ನಿರ್ಮಲ ಪ್ರೇಮಮಿಲನವೇಯೆಂಬುದನ್ನು ವಿವೇಚಿಸುವಷ್ಟು, ತಾಳ್ಮೆ ವಹಿಸಬೇಕಾಗು ವುದು ಪಶುಪ್ರಾಣಿಗಳಂತೆ ಉದ್ರೇಕದಿಂದ ತಮ್ಮ ಕಾಮವಾಸನೆಗಾಗಿಯೇ ಪ್ರೀತಿಯ ಹೆಸರನ್ನು ಕೆಡಿಸುವದು ಒಳ್ಳೆಯದಲ್ಲ. ಉಭಯ ಪಕ್ಷದವರೂ ಈ ಬಗೆಯ ಪ್ರೇಮಾಂಕುರವನ್ನು, ಎಚ್ಚರಿಕೆಯಿಂದ ಬೆಳೆಯಗೊಡಬೇಕಾಗು ವುದು.

"ಅವಳಲ್ಲಿ ತನಗೆ ಹೆಚ್ಚು ಪ್ರೀತಿ ಇರುವದೆಂಬ ಕಲ್ಪನೆ, ಜೀನ ಸಮ್ಮರ ನಲ್ಲಿ ಚೆನ್ನಾಗಿ ಮನೆಮಾಡಿಕೊಂಡಿತು. ಅವಳನ್ನು ನಿಜವಾಗಿ ಪ್ರೀತಿಸ ತೊಡಗಿದ; ತನ್ನವಳನ್ನಾಗಿರಿಸಿಕೊಳ್ಳಬೇಕೆಂಬ ಆಶೆ ದಿನದಿನಕ್ಕೆ ಅವನಲ್ಲಿ ಬೆಳೆಯತೊಡಗಿತು "

"ಅವಳು ಅತಿಚೆಲುವೆ. ಮೇಲೆ ಪ್ಯಾರಿಸ ನಗರದ ಸ್ತ್ರೀಯರಿಗೆ ಸಹಜ ವೆನಿಸಿಕೊಂಡಿರುವ ಬೆಡಗು ಬಿನ್ನಾಣಗಳೂ, ಅವಳಲ್ಲಿ ಮನೆಮಾಡಿಕೊಂಡಿದ್ದು ದರಿಂದ ಪುರುಷರ ಮನಸ್ಸನ್ನು ಬೇಗ ವಶಪಡಿಸಿಕೊಳ್ಳುವ ಜಾಣತನ ಅವಳ ಲ್ಲಿತ್ತು. ಅಲ್ಲದೆ ವಿನೋದಪ್ರಿಯಳು ಬೇರೆ "

"ಮೂರು ತಿಂಗಳು ಕಳೆಯಿತು ಪ್ಯಾರಿಸ ನಗರದಲ್ಲಿರುವ ಇತರ ಸ್ತ್ರೀಯರಂತೆ, ಇವಳೂ ಓರ್ವ ಸಾಮಾನ್ಯ ಹೆಣ್ಣೆಂದು ಜೀನನಿಗೆ ಮನವರಿಕೆ ಯಾಗಲು, ಸ್ವಲ್ಪ ಸಮಯ ಬೇಕಾಯಿತು "

"ಬೇಸಿಗೆಯ ಸಮಯದಲ್ಲಿ, ಪ್ರತ್ಯೇಕವಾಗಿ ಇರಲು ಮನೆಯನ್ನು ಅಂಡ್ರೇನ್ಸೆ ಪ್ರಾಂತದಲ್ಲಿ ಬಾಡಿಗೆಗೆ ತೆಗೆದುಕೊಂಡರು "

"ಹೀಗೆ ಅವರು ಇರುತ್ತಿರಲು, ಒಂದು ದಿನ ನಾನವರ ಮನೆಗೆ ಹೋಗಿದ್ದೆ. ಅಂದು ರಾತ್ರಿ ನಡೆದ ಪ್ರಸಂಗದಲ್ಲಿ ಅವರೀರ್ವರ ನಡುವೆ ಮನ ಸ್ತಾಪ ಮೊದಲ್ಗೊಂಡಿತೆಂದು ನನಗೆನಿಸುತ್ತದೆ."

"ಅದೊಂದು ಸುಂದರ ರಾತ್ರಿ; ಹೊರಗೆ ಪಾದಚಾರಿಗಳಾಗಿ ಸ್ವಲ್ಪ ಹಾದಿ ನಡೆಯೋಣವೆಂದು ನಮಗೆನಿಸಿತು. ಇಂತಹ ಸುಖದ ಸಮಯದಲ್ಲಿ ಈ ಬಯಕೆ ಬರುವುದು ಸಹಜವೇ ನಮ್ಮ ಸುತ್ತು ಕಾವ್ಯಮಯ ಜಗತ್ತು ನಿರ್ಮಿತವಾದಂತೆನಿಸಿತು. ಉತ್ಸಾಹ ಉಕ್ಕೇರಿ ಬಂದು, ನಮ್ಮ ಮನಸ್ಸುಗಳು ಹಗುರಗೊಂಡವು. ನಿಸರ್ಗದಲ್ಲಿ ಕಂಡುಬರುವ ರಮಣೀಯತೆ, ಚೆಲುವು

ನಮ್ಮ ಊಹಾ ಶಕ್ತಿಯಲ್ಲಿ ಕೆರಳಿದವು. ಪರಸ್ಪರರಲ್ಲಿ ಪ್ರೇಮವಂಕುರಿಸಲು ಇದೊಂದು ದಿವ್ಯ ಸಮಯವೆಂದು ಎಲ್ಲರಿಗೂ ಅನಿಸಿರಬೇಕು. ನಮ್ಮ ಬಯಕೆಗಳು ಉದಾತ್ತವಾದವು ಭಾವಗಳು ಉದ್ರೇಕಗೊಂಡವು ನಮ್ಮಲ್ಲಿ ಅಡಗಿಕೊಂಡ ಪ್ರೇಮ ಜ್ಯೋತಿ ಕೆರಳಲ್ಪಟ್ಟಿತು ಆ ರಾತ್ರಿ ಮನದಲ್ಲಿ ಬರುವ ಕಲ್ಪನಾ ವಿಲಾಸಗಳು, ಗಾಳಿಯಂತೆ ಹಸುರಾಗಿ ಹಾರಿ ಹೋಗುತ್ತಿದ್ದವು ಈ ರೀತಿಯ ಮನಸ್ಸಿನಿಂದ ನಾವು, ಸಮುದ್ರ ದಡದಲ್ಲಿ ಕಾಲ್ನಡಿಗೆಯಲ್ಲಿ ಸಾಗಿದ್ದೆವು

ಇದ್ದಕ್ಕಿದ್ದ ಹಾಗೆ ಜೋಸಫೀನಳು (ಇದು ಅವಳ ಹೆಸರು) ಕೂಗಿ "ಅಲ್ಲಿ ನೋಡಿ ಏನು ಚೆಲವು ಆ ಮಿಾನಿನದು" ಎಂದು ನಮ್ಮ ದೃಷ್ಟಿಯನ್ನತ್ತಕಡೆ ಎಳೆದಳು.

"ಜೀನನು ಅವಳು ತೋರಿದ ದಿಕ್ಕಿನ ಕಡೆ ನೋಡದಂತೆ, "ಅಹುದು ಬಹಳ ಸುಂದರ" ಎಂದು ಹೇಳಿದನು

ಅವಳಿಗೆ ಕೋಪ ಬಂತು

"ನೀವು ಆ ನೋಟವನ್ನು ನೋಡದೇ ಹೇಳುವಿರಿ ಅದರ ಚೆಲುವು ನಿಮಗೆ ತಿಳಿಯಿತೇ? ಎಂದಳು"

ಆವನು ಸುಮ್ಮನೇ ನಕ್ಕು ಬಿಟ್ಟ

"ಅಹುದು ಇದೊಂದು ಸುಂದರ ರಾತ್ರಿ. ಇಂತಹ ಸಮಯದಲ್ಲಿ ಆನೇಕ ಭಾವನೆಗಳು ಉದಯಿಸಬೇಕಾಗಿತ್ತು," ಎಂದು ಹೇಳಿದ.

ಅವಳೇನನ್ನೂ ಹೇಳದೇ, ಅದಕ್ಕೆ ಸುಮ್ಮನಿದ್ದಳು ತುಸು ತಡೆದು ಮತ್ತೆ ಮಾತನಾಡಬೇಕೆಂದೆನಿಸಿ,

"ನೀವು ನಾಳೆ ಪ್ಯಾರಿಸ ನಗರಕ್ಕೆ ಹೋಗಬೇಕೇನು?" ಎಂದು ಕೇಳಿದಳು

"ನಾನಿನ್ನೂ ಯಾವ ನಿರ್ಧಾರಕ್ಕೂ ಬಂದಿಲ್ಲ."

ಈ ಮಾರುತ್ತರ ಅವಳನ್ನು ಉದ್ರೇಕಗೊಳಿಸಿತು.

"ಇಂತಹ ರಾತ್ರಿಯಲ್ಲಿ ಕಾಲನಡಿಗೆಯಲ್ಲಿ ಹರುಷದಿಂದ ಆಪ್ತರೊಂದಿಗೆ ಹೋಗುತ್ತಿರುವಾಗ, ನಿಮ್ಮ ಮೌನದಲ್ಲಿಯೇ ದಾರಿ ಸಾಗಿಸುವುದು ನಿಮಗೆ ಉಚಿಸುವುದೆ?" ಎಂದು ಮತ್ತೆ ಜೀನನನ್ನು ಕೇಳಿದಳು.

" ನಿನ್ನ ಇಲ್ಲಸಲ್ಲದ ಮಾತುಗಳಿಂದ, ಈ ರಾತ್ರಿಯ ಸೊಬಗಿನಲ್ಲಿ ನಮ್ಮ ಗಾಗುತ್ತಿರುವ ಸುಖಕ್ಕೆ ನೀನು ಅಡ್ಡ ಬರುತ್ತಿರುವೆ," ಎಂದು ಜೀನನು ಹೇಳಿದನು

ಈ ಮಾತೂ ಅವಳನ್ನು ರೇಗಿಸಿತು

ಕೊನೆಗೊಂದು ದಿನ, ಇವಳ ಬಂಧನದಿಂದ ವಿಮುಕ್ತನಾಗಬೇಕೆಂದು ನಿಶ್ಚಯಿಸಿದ ಅವಳೊಂದಿಗೆ ಬೆರೆತು ಸುಖದಿಂದ ಜೀವಿಸುವುದು ಕಷ್ಟ ವೆಂಬುದು ಕಂಡುಬಂದುದರಿಂದ, ಈ ನಿಶ್ಚಯಕ್ಕೆ ಅವನು ಬರಬೇಕಾಯಿತು ನಿತ್ಯವೂ ದಂಪತಿಗಳಂತೆ ಕೂಡಿದ್ದು ಜಗಳಾಡುವುದಕ್ಕಿಂತ ಬೇರೆಯಾಗಿ ನಿಶ್ಚಿಂತೆಯಿಂದ ಇರುವುದೇ ಒಳಿತೆಂದು ಭಾವಿಸಿ, ತನ್ನೆಲ್ಲ ವಸ್ತುಗಳನ್ನೂ ಮಾರಿ, ಅವಳ ಜೀವನಕ್ಕೆಂದು ಹಣವನ್ನು ಕಲೆ ಹಾಕಿ, ಅವಳ ಕೋಣೆಯ ಟೇಬಲ್ಲಿನ ಮೇಲೆ ಇಟ್ಟು, ಪತ್ರವೊಂದನ್ನು ಬರೆದು ಎಲ್ಲ ವಿವರಗಳನ್ನು ಅದರಲ್ಲಿ ಸೂಚಿಸಿ, ನನ್ನ ಮನೆಗೆ ಬಂದು ಸೇರಿದ

" ಆ ಸಮಯದಲ್ಲಿ ಆ ಚಿತ್ರಗಾರನಿನ್ನೂ ಹೆಸರು ಗಳಿಸಿರಲಿಲ್ಲ. ಆದುದ ರಿಂದ ತನ್ನೆಲ್ಲ ಆಸ್ತಿಯನ್ನು ಅವನು ಮಾರಬೇಕಾಯಿತು

" ಮೂರನೆಯ ದಿನ ಮಧ್ಯಾಹ್ನ ಮೂರು ಗಂಟೆಗೆ, ಹೊರಗಿನಿಂದ ದನಿ ಕೇಳಿಸಿತು ನಾನೇ ಬಾಗಿಲು ತೆರೆದೆ ಅವಸರದಿಂದ ನನ್ನನ್ನು ಲಕ್ಷಿ ಸದೆ ಜೋಸ್ಫೀನಳು ನನ್ನ ಚಿತ್ರ ಶಾಲೆಯನ್ನು ಪ್ರವೇಶಿಸಿದಳು. ನಾನು ಅವನ ಮಿತ್ರನಾಗಿ ಅದೇ ಕಲೆಯನ್ನು ಅಭ್ಯಾಸಿಸುತ್ತಿದ್ದುದರಿಂದ, ಅವನು ನನ್ನಲ್ಲಿ ಎರಡು ದಿನಗಳಿರಬೇಕೆಂದು ಬಂದಿದ್ದನು.

" ನಾನೂ ಅವಳನ್ನು ಹಿಂಬಾಲಿಸಿದೆ "

ಒಳಗೆ ಬಂದವಳೇ ಅವನ ಕಾಗದವನ್ನೂ, ಹಣವನ್ನೂ ಅವನು ಕೂತಿದ್ದ ಕುರ್ಚಿಯ ಮುಂದೆ, ನೆಲದ ಮೇಲೆ ಚೆಲ್ಲಿ " ನೀವು ಇದನ್ನು ತೆಗೆದುಕೊಳ್ಳಬಹುದು. ನನಗೆ ಬೇಡ" ಎಂದಳು ಸಿಟ್ಟಿನಿಂದ.

ಜೀನನು " ನಿನಗೇನು ಬೇಕು ? " ಎಂದು ಕೇಳಿದ.

ಅವಳು " ಸಾಮಾನ್ಯ ಬೀದಿಯ ಒಸವಿಯಂತೆ ನನ್ನೊಂದಿಗೆ ನೀವು ವರ್ತಿಸುವುದು ನನಗೆ ಬೇಡಾಗಿದೆ. ನೀವು ನನ್ನಲ್ಲಿ ಪ್ರೀತಿ ತೋರಿದಿರಿ, ನಾನು ನಿಮ್ಮವಳಾದೆ. ನಿಮ್ಮಿಂದ ನಾನು ಏನನ್ನೂ ಬಯಸಲಿಲ್ಲ. ನಿಮ್ಮ

ಪ್ರೀತಿಯನ್ನು ಬೇಡಿದೆ. ಈ ರೀತಿ ನನ್ನಿಂದ ನೀವು ಬೇಗ ದೂರಾಗುವುದು ನನಗೆ ಒಪ್ಪದ ಮಾತು."

ಅವಳು "ನಮ್ಮ ಪ್ರೇಮಮಯ ಜೀವನಕ್ಕೆ ಕಲಂಕ ತರಬೇಡಿ. ನಾನದನ್ನು ಸಹಿಸಲಾರೆ." ಎಂದಳು

ಇವರ ಈ ಜಗಳವನ್ನು ಸಮಾಧಾನ ರೀತಿಯಲ್ಲಿ ಕೊನೆಗಾಣಿಸಲು ಹವಣಿಸಿದ ನನ್ನ ಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಕೊನೆಗೆ ನಿಜವನ್ನು ಹೇಳಬೇಕೆಂದೆನಿಸಿತು "ಜೋಸಫೀನ್, ನನ್ನ ಮಾತು ಕೇಳು; ಇವನ ತಂದೆ ತಾಯಿಯರು ಇವನು ತಮ್ಮ ಹತ್ತಿರ ಇರಬೇಕೆಂದು ಇಚ್ಛಿಸುತ್ತಾರೆ ಅವನು ಮದುವೆಯಾಗಬೇಕಂತೆ ಆದರೂ ನಿನ್ನಲ್ಲಿ ಅವನಿಗೆ ಪ್ರೇಮ ಕಡಿಮೆಯಾಗಿಲ್ಲ" ಎಂದು ಹೇಳಿದೆ

ಕೋಪದಿಂದ "ಆ! ಈಗ ತಿಳಿಯಿತು ನೀವು ಮದುವೆಯಾಗುವಿರಾ? ಇದು ನಿಜವೇ?" ಎಂದು ಅವನನ್ನು ಕೆಣಕಿದಳು.

"ಅಹುದು ? ಎಂದು ಅವನು ಗಂಭೀರವಾಗಿ ನುಡಿದ.

"ಹಾಗಾಗುವುದಾದರೆ, ನಾನಿನ್ನು ಜೀವಿಸುವುದಿಲ್ಲ. ಆತ್ಮಹತ್ಯ ಮಾಡಿಕೊಂಡು ಮಡಿಯುವೆ. ನಿಮಗಿದು ತಿಳಿದಿರಲಿ" ಎಂದು ತನ್ನ ನಿಶ್ಚಯವನ್ನು ಸೂಚಿಸಿದಳು.

ಅವನು ಕುಚೇಷ್ಟೆಯಿಂದ ನಗುತ್ತ "ನೀನು ಆತ್ಮಹತ್ಯ ಮಾಡಿಕೊಂಡರೆ, ನನಗೇನು?" ಎಂದು ಹೇಳಿದ.

"ಇಷ್ಟಾದರೂ ನೀವು ನಿಮ್ಮ ನಿಶ್ಚಯ ಬದಲಾಯಿಸುವುದಿಲ್ಲವೇ?" ಎಂದು ಮತ್ತೆ ಕೇಳಿದಳು.

"ನನಗೆ ಈ ಬೆದರಿಕೆಯ ಮಾತು ಬೇಡ. ನನ್ನ ಮನೋನಿಶ್ಚಯವನ್ನು ಬದಲಾಯಿಸುವುದಿಲ್ಲ. ತಿಳಿಯಿತೇ?" ಎಂದು ತನ್ನ ನಿಶ್ಚಿತ ಅಭಿಪ್ರಾಯವನ್ನು ಜೀನನು ಹೇಳಿದನು.

"ಸುಮ್ಮನೇ ಹಾಸ್ಯಕ್ಕೆಂದು ನನ್ನೊಂದಿಗೆ ನೀವು ಸರಸದ ಆಟವಾಡಬೇಡಿ. ನನ್ನ ನಿಶ್ಚಯವೇನೆಂಬುವುದು ಈಗಲೇ ನೀವು ಕಾಣುವಿರಿ. ಈಗಲೇ ಈ ಕಿಟಕಿಯಿಂದ ಕೆಳಗೆ ಹಾರಿಕೊಂಡು ಪ್ರಾಣಬಿಟ್ಟ ಮೇಲೆಯೇ ನೀವು ಬೇರೊಬ್ಬಳನ್ನು ಮದುವೆಯಾಗುವಿರಿ. ನಾನು ಜೀವಂತವಿರುವಾಗ

ಬೇರೊಬ್ಬಳು ನಿಮ್ಮನ್ನು ಮದುವೆಯಾಗುವುದು ಸಾಧ್ಯವಾಗಲಾರದು ” ಎಂದು ಆವೇಶದಿಂದ ಹೇಳಿದಳು

“ ಆಗಬಹುದು ನನ್ನ ಅಭ್ಯಂತರವೇನೂ ಇಲ್ಲ. ” ಎಂದು ಹೇಳುತ್ತ ಮುಚ್ಚಿದ ಒಂದು ದೊಡ್ಡ ಕಿಡಕಿಯ ಬಾಗಿಲನ್ನು ಜೀನನು ತೆರೆದನು.

ಆಗವಳು ಅವನ ಕಡೆ ಬೀರಿದ ನೋಟದಲ್ಲಿ ಹುಚ್ಚು ಕಳೆ ತಾಂಡವ ವಾಡುತ್ತಿತ್ತು ತರ್ಕ-ವಿತರ್ಕಗಳಿಗೆ ಆಸ್ಪದವಿಲ್ಲದ ಅವಳ ಹೃದಯ ಒಂದೇ ನಿಶ್ಚಯಕ್ಕೆ ಬಂದುಬಿಟ್ಟಿದ್ದಿತು ಏನು ನಡೆಯುವುದೆಂಬುದನ್ನು ನೋಡುವ ವಿರಾಮವಿಲ್ಲದಷ್ಟು ಸ್ವಲ್ಪೇ ವೇಳೆಯಲ್ಲಿ, ಓಡಿಹೋಗಿ ಕಿಡಕಿಯಿಂದ ಹೊರಗೆ ಹಾರಿಕೊಂಡಳು ಎಲ್ಲವೂ ಮಿಂಚಿನಂತೆ ಅರಕ್ಷಣದಲ್ಲಿ ನಡೆದುಹೋಯಿತು ಬೀದಿಯಲ್ಲಿ ನೆಲದ ಮೇಲೆ ಎಚ್ಚರ ತಪ್ಪಿ ಬಿದ್ದ ಅವಳನ್ನು ಸಂತೈಸಿದೆವು ಎರಡೂ ಕಾಲುಗಳು ಮುರಿದುಹೋಗಿದ್ದವು ಗಾಯವು ಮಾದಮೇಲೆ ಅವಳಿಗೆ ನಡೆಯುವುದು ಶಕ್ಯವಾಗಲೇ ಇಲ್ಲ ತನ್ನ ಮೂರ್ಖತನದಿಂದ ಇವಳಿಗೆ ಬಂದೊದಗಿದ ಈ ವಿಪತ್ತಿಗೆ ಮರುಗಿ, ತಂದೆ ತಾಯಿಯರನ್ನೊಪ್ಪಿಸಿ, ಅವಳನ್ನೇ ಮದುವೆಯಾದ

“ ಇದು ಇವಳ ಪ್ರಣಯದ ದಾರುಣ ಕತೆ. ”

ಆ ಹೊತ್ತಿಗೆ ಕತ್ತಲು ಪೂರ್ತಿ ವ್ಯಾಪಿಸಿತ್ತು ಜೋಸಫೀನಳು ಮನೆಗೆ ಹೋಗಬೇಕೆಂದು ಬಯಸಿದುದರಿಂದ ಆ ದಂಪತಿಗಳು ತಮ್ಮ ಮನೆಗೆ ತೆರಳಿದರು. ಅಲ್ಲಿಗೆ ಬಂದು ಒಂದು ಗಂಟೆಯಾಗಿದ್ದರೂ, ಅವರಿಬ್ಬರು ಮೌನವಾಗಿದ್ದುದು ಆಶ್ಚರ್ಯದ ವಿಷಯವೇ.

( —The Artist's Wife )

# ಎಲ್ಲವೂ ಮುಗಿಯಿತು.

ಲ್ಯಾಮರಿನ್ನನು ಅದೇ ತಾನೆ ಅಲಂಕಾರವನ್ನು ಮುಗಿಸಿದ್ದ ತನ್ನ ನಿಲುವುಗನ್ನಡಿಯಲ್ಲಿ ನೋಡಿಕೊಂಡು, ಆನಂದದಿಂದ ಕುಣಿಯತೊಡಗಿದ. ತನ್ನ ತಲೆಕೂದಲು ಸ್ವಲ್ಪ ನರತಿದ್ದರೂ ಅವನ ಸುಂದರ ರೂಪಕ್ಕೆ ಭಂಗ ವಾಗಿರಲಿಲ್ಲ ಆಳು ಎತ್ತರ, ತಿಳುವಾದ ದೇಹ ಶ್ರೀಮಂತನಾದರೂ ಬೊಜ್ಜು ಬಂದಿರಲಿಲ್ಲ ಸಣ್ಣವಾಗಿ ಬೆಳೆಯಿಸಿದ ಮೀಸೆ ಅವನ ವಯಸ್ಸನ್ನು ಕಿರಿದಾ ಗಿಸುವಂತಿತ್ತು ಒಟ್ಟಿನ ಮೇಲೆ ನೋಡುವವರಿಗೆ ಅವನೊಬ್ಬ ಯುವಕನಂತೆ ಕಾಣಬಹುದಾಗಿತ್ತು.

"ಲ್ಯಾಮರಿನ್ನನು ಇನ್ನೂ ಜೀವಂತ ಇರುವನು," ಎಂಬ ಮಾತುಗಳು ಮೆಲ್ಲನೆ ಅವನ ಮುಖದಿಂದ ಹೊರಬಿದ್ದವು

ಹೊರಗಡೆ ಆಫೀಸಿನಲ್ಲಿ ಅವಸರದ ಕಾಗದ ಪತ್ರಗಳು, ತನ್ನನ್ನು ಎದುರು ನೋಡುತ್ತಿದ್ದುದರಿಂದ ಅಲ್ಲಿಗೆ ಬಂದು ಸೇರಿದ.

ಅವನ ಟೇಬಲ್ಲಿನ ವ್ಯವಸ್ಥೆ ನೋಡಿದರ ಯಾವಾಗಲೂ ಕೆಲಸ ಮಾಡು ವವರ ಟೇಬಲ್ಲಿನಂತಿರಲಿಲ್ಲ ಕೆಲವು ಕಾಗದಗಳು, ದಿನ ಪತ್ರಿಕೆಗಳು, ಮಾಸಿಕ ಗಳು ಇಡಲ್ಪಟ್ಟಿದ್ದವು ಅಂದು ಬಂದ ಟಪಾಲಿನ ಕಾಗದಗಳನ್ನು ಮೇಲೆಯೇ ಇಟ್ಟದ್ದುದರಿಂದ, ತನಗೆ ಪರಿಚಿತವಾದ ಅಕ್ಷರಗಳುಳ್ಳ ಕಾಗದಗಳನ್ನು ತೆಗೆದು ಕೊಂಡು, ಆಶ್ಚರ್ಯದಿಂದ ಆ ಲಕೋಟೆಗಳನ್ನು ಒಂದೇಸವನೆ ನೋಡತೊಡ ಗಿದ. ಅವುಗಳನ್ನೊಡೆಯುವ ಮುನ್ನವೇ ಅವು ಯಾರಿಂದ ಬಂದವೆಂದು ತರ್ಕಿಸುವುದು ಅವನ ರೂಢಿ ಹಾಗೆ ಪರಿಚಿತರಿಂದ ಬಂದವುಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿ, ಆಯಾ ಪತ್ರಗಳೊಳಗಿನ ವಿವರಗಳನ್ನು ಕುರಿತು, ವಿಚಾರಿಸುವುದು ಅವನ ಮೊದಲನೆಯ ಕೆಲಸವಾಗಿತ್ತು.

ಅಂದು ಅವನ ದೃಷ್ಟಿಯನ್ನೊಂದು ಪತ್ರ ಸೆಳೆಯಿತು ಅದು ವಿರಲ ವಾದ ಅಕ್ಷರಗಳಿಂದ ಕೂಡಿದ ಕಾಗದವಿತ್ತು. ಅದರ ಮೇಲಕ್ಷರಗಳನ್ನು ನೋಡುತ್ತ "ಇದು ಯಾರದಿರಬಹುದು? ಈ ಅಕ್ಷರಗಳ ಪರಿಚಯ ನನ ಗಿದೆ: ಆದರೆ ಇದು ಯಾರದೆಂದು ನಿಶ್ಚಯಿಸಲಾರೆ" ಎಂದು ಮನದೊಳಗೆ ಅಂದುಕೊಂಡ

ಆ ತೆಳುವಾದ ಕಾಗದವನ್ನು ಬೆಳಕಿಗೆ ಎತ್ತಿ ಹಿಡಿದು ನೋಡುತ್ತ ಏನಾದರೂ ತಿಳಿಯುವುದೇ? ಎಂದು ಪರೀಕ್ಷಿಸಿದ

ಅದರ ವಾಸನೆ ನೋಡಿದ, ಮತ್ತೆ ಪರೀಕ್ಷೆ ಮಾಡಿದ ಭೂತ ಕನ್ನಡಿಯ ನೆರವಿನಿಂದ ನೋಡಿದುದೂ ಆಯಿತು ಆದರೂ ಅದು ಯಾರ ದೆಂದು ನಿಶ್ಚಯಿಸಲಾಗಲಿಲ್ಲ "ಇದು ತೀರ ಪರಿಚಿತರದೇ ಆದರೆ ಬಹಳ ದಿನಗಳಿಂದ ಇವರ ಪತ್ರ ಬಂದಿಲ್ಲವಾದುದರಿಂದ, ಇವರಾರೆಂಬುದನ್ನು ನಿಶ್ಚಯಿಸಲಾರೆ ಇರಲಿ ನೋಡುವಾ" ಎಂಬ ನಿರ್ಧಾರದಿಂದ ಅದನ್ನೊಡೆದು ಓದತೊಡಗಿದ —

"ನನ್ನ ಆಪ್ತ ಮಿತ್ರನೇ, ನೀನು ನನ್ನನ್ನು ಮರೆತಿರಬಹುದು ನಾನು ನಿನಗೆ ಬರೆಯದೆ ಇಪ್ಪತ್ತೈದು ವರುಷಗಳಾಗಿವೆ ಅಂದು ನಾನೋರ್ವ ಯುವತಿಯು, ಇಂದು ಮುಪ್ಪು ಬಂದಿದೆ. ನಾನು ನಿನ್ನೊಂದಿಗೆ ದೀರ್ಘ ಕಾಲದ ನಮಸ್ಕಾರ ಹೇಳಿದ ನಂತರ, ನನ್ನ ಗಂಡನೊಂದಿಗೆ ಪ್ರಾಂತಗಳಲ್ಲಿ ಅವನ ಹಿಂದೇ ಹೊರಡಬೇಕಾಯಿತು ನನ್ನ ಗಂಡನನ್ನು "ನನ್ನ ಆಪ್ತಪುತ್ರ" ಎಂದು ಕರೆಯುತ್ತಿದ್ದೆ ನಿನಗೆ ನೆನಪಿದೆಯೋ? ಆತನ ನೆನಪು ಈಗ ಉಳಿದಿರುವುದೆ? ಇಂದಿಗ ಆತ ಮರಣಹೊಂದಿ ಆರು ವರುಷಗಳಾದವು. ಮತ್ತೆ ಪ್ಯಾರಿಸ ನಗರಕ್ಕೆ ಈಗ ಹದಿನೈದು ವರುಷಗಳ ತರುಣಿಯು, ಸುರೂಪಿಯು ಆದ ನನ್ನ ಮಗಳೊಂದಿಗೆ ಅನುರೂಪನಾದ ವರನನ್ನು ಆರಿಸಲು, ಬರುವವಳಿದ್ದೇನೆ. ಅವಳ ಜನನದ ಬಗ್ಗ ನಿನಗ ಮೊದಲಿಗೇ ತಿಳಿಸಿರುವೆನು. ಇದು ಕ್ಷುಲ್ಲಕ ವಿಷಯವೆಂದು ನೀನು ನೆನಪಿನಲ್ಲಿಟ್ಟಿರಲಿಕ್ಕಿಲ್ಲ.

ಇಂದಿಗೂ ನೀನು ಬಹು ಸುಂದರನಾಗಿ ಈ ವಯಸ್ಸಿನಲ್ಲಿಯೂ ನಿನ್ನ ಚೆಲುವನ್ನು ಕಾದುಕೊಂಡಿರುವಿಯೆಂದು ನಾನು ಕೇಳಿರುವೆನು "ಲಿಸ್ಸೀ" ಎಂಬ ಪ್ರೇಮದ ಹೆಸರಿನಿಂದ ಕರೆಯುವ ನನ್ನನ್ನು ಇನ್ನೂ ನೀನು ಪ್ರೀತಿಸುತ್ತಿದ್ದರೆ, ಇಂದು ಸಂಜೆ, ಶ್ರೀಮಂತ ವ್ಯಾನ್ಸೀ ಇವರ ಮನೆಗೆ ಊಟಕ್ಕೆ ಬರಲೇಬೇಕೆಂದು ಈ ನಿನ್ನ ವಿಶ್ವಾಸದ ಸ್ನೇಹಿತಳು ಆಮಂತ್ರಿಸುತ್ತಾಳೆ. ನನ್ನನ್ನು ಕಂಡೊಡನೆ ನೀನು ಪ್ರೀತಿಯಿಂದ ನನ್ನ ಮೃದು ಹಸ್ತನ್ನು ಮುದ್ದಿಸಬಾರದು ಪರಿಚಯದ ಕುರುಹೆಂದು ಕುಲುಕಬೇಕು. ಇದು ನ್ನ ನೆನಪಿನಲ್ಲಿರಲಿ. ಹೆಚ್ಚಿನ ಪ್ರೀತಿ-ವಿಶ್ವಾಸದಿಂದ ಬರುವ ಈ ಕರೆಯನ್ನು, ರಾಕರಿಸಬೇಡೆಂದು ಪ್ರಾರ್ಥಿಸುವ,— ಲಿಸ್ಸೀವಾನ್ಸಳು,"

ಪತ್ರವು ಮುಗಿದಂತೆಲ್ಲ ಅವನೆದೆ ಹಾರತೊಡಗಿತು. ಎಲ್ಲವನ್ನೂ ನೆನೆದುಕೊಂಡು ಸುಮ್ಮನೇ ಕುಳಿತುಬಿಟ್ಟನು. ಯೋಚಿಸಿದಂತೆಲ್ಲ ಆವೇಶ ದಿಂದ ಅವನ ಕಣ್ಣುಗಳಲ್ಲಿ ಹನಿಗಳು ತುಂಬಿಕೊಂಡವು.

ಅವನ ಜೀವನಾವಧಿಯಲ್ಲಿ ಯಾರನ್ನಾದರೂ ಮಮತೆಯಿಂದ ಪ್ರೀತಿ ಸಿದ್ದರೆ, ಈ ಮುದ್ದಿನಕಣಿಯಾದ ಲಿಸ್ಸೀಯನ್ನೇ ಅವಳ ಕುರುಳುಗಳಿಂದ ಸೂಸುತ್ತಿದ್ದ ಸುವಾಸನೆಗೆ ಅವನವಳನ್ನು "ಸುಗಂಧ"ವೆಂದು ಕರೆಯುತ್ತಿ ದ್ದನು ಅವಳ ತಿಳಿನೀಲಿ ಕಣ್ಣುಗಳು ಬಹು ಆಕರ್ಷಮಯವಾಗಿದ್ದವು. ಈ ಕೆಲುವೇ, ಇವನು ಅವಳನ್ನು, ಪ್ರೀತಿಸಲು ಕಾರಣವಾಗಿದ್ದಿತು ಇಂತಹ ಸುಂದರ ಸುಕುಮಾರ ಪುಷ್ಪವನ್ನು, ಇಳಿವಯಸ್ಸಿನ ಕೆಮ್ಮು-ದಮ್ಮಿನಿಂದ ಕೃಶನಾದ ಬೇರೊಬ್ಬ ಶ್ರೀಮಂತನು ಮದುವೆಯಾಗಿ, ದೂರ ಕರೆದುಕೊಂಡು ಹೋಗಿದ್ದ. ಅವನಿಗೆ ತನ್ನ ಭಯವಿದ್ದ ವಿಷಯವೂ ಲಾಮರಿನ್ನನಿಗೆ ತಿಳಿ ದಿತ್ತು ಆತನ ಪ್ರೀತಿಯ ಲಿಸ್ಸೀಯು ದೂರವಾದ ತಾಪ ಸಹಿಸುವುದು, ಲ್ಯಾಮರಿನ್ನನಿಗೆ ಕಷ್ಟವಾಗಿತ್ತು ನಿರ್ವಾಹವಿಲ್ಲದೆ ಈ ವಿರಹವನ್ನು ಅನುಭವಿಸಬೇಕಾಯಿತು

ಅಮೋಘವಾದ ಒಂದು ಸಂಜೆ ನಡೆದ ಸನ್ನಿವೇಶದ ನೆನಪು, ಅವನಿಗೆ ಬಂದಿತು. ಅಂದು ಡಾನ್ಸ ಮುಗಿಸಿಕೊಂಡು ನೇರವಾಗಿ ತನ್ನಲ್ಲಿಗೆ ಅವಳು ಬಂದಳು. ಇಬ್ಬರೂ ಬೋಯ್ಸ್ ಡಿ. ವೋನ್ ತೋಪಿನಲ್ಲಿ ವಿಹಾರಕ್ಕೆಂದು ಹೊರಟರು ಅದು ವಸಂತಕಾಲ, ಪ್ರೇಮಿಗಳಿಗೆ ಅತ್ಯಂತ ರಮ್ಯವಾದ ಸಮಯ ಅವಳ ಸಾನ್ನಿಧ್ಯದಿಂದ ಬರುತ್ತಿದ್ದ ಸವಿವಾಸನೆ ಬಹು ಆಕರ್ಷ ವಾಗಿತ್ತು. ಸುಂದರ ಅಲಂಕಾರದಲ್ಲಿದ್ದ ಅವಳು, ದೇವ ಕನ್ಯೆಯಂತೆ ಕಂಡು ಬಂದಳು. ಕಾಮದಾಹವನ್ನು ಹೆಚ್ಚಿಸುವ ಅವಳ ಲಾವಣ್ಯ, ಅವನನ್ನು ಹುಚ್ಚ ನನ್ನಾಗಿ ಮಾಡಿದ್ದಿತು. ಇಬ್ಬರೂ ಕೈ ಕೈ ಸೇರಿಸಿ, ಮೈ ಮೈ ಮುಸೆಯುತ್ತ ಆ ತೋಟದಲ್ಲಿಯ ಸರೋವರದ ದಂಡೆಗೆ ಬಂದರು ಗಿಡದೆಲೆಗಳ ಸಂದಿ ನಿಂದ ನೀರಿನಲ್ಲಿ ಬೀಳುತ್ತಿದ್ದ ಚಂದ್ರನ ಶೀತಲ ಕಿರಣಗಳ, ಬೆಳಕು ಅವಳನ್ನು ಮರುಳುಗೊಳಿಸಿರಬೇಕು

ದಡದ ಹತ್ತಿರ ನಿಂತು, ಕೈ ಕೊಸರಿಕೊಳ್ಳುತ್ತ ಆಕೆ ಅಳತೊಡಗಿದಳು. ಅವನು ಏನೆಂದು ಕೇಳಿದ.

" ನನಗೇನು ಅರ್ಥವಾಗುತ್ತಿಲ್ಲ. ಅಲ್ಲಿ ನೀರಿನಲ್ಲಿ ಕಾಣುವ ಚಂದನ್ರ ಬೆಳಕು ನನ್ನನ್ನು ಹುಚ್ಚಳಂತೆ ಮಾಡಿದೆ. ಇಂತಹ ರಸಮಯ ದೃಶ್ಯಗಳನ್ನು ನಾನು ಕಂಡಾಗೆಲ್ಲ ಉದ್ರೇಕಗೊಂಡು ಅಳುವಂತಾಗುತ್ತದೆ" ಎಂದು ಆವೇಶ ದಿಂದ ಹೇಳಿದಳು

ಅವನು ನಗುತ್ತ ಅವಳನ್ನು ಸಮೀಪಿಸಿ, ಪ್ರೇಮದಿಂದ ಆಲಿಂಗಿಸಿದ. ಅಂತಹ ಯುವತಿಯು ಮುದುಕ ಗಂಡನ ಪದರಿನಲ್ಲಿ ಬಿದ್ದು, ತಪಿಸುತ್ತಿರುವ ಅವಸ್ಥೆಗೆ ಮನಸದಲ್ಲಿಯೇ ಮರುಗಿದ

ಅವರೀರ್ವರೂ, ಸಮವಯಸ್ಕರು, ಪ್ರೇಮೋಪಾಸನೆಗೆ ತಕ್ಕ ಅರ್ಹತೆ ಯುಳ್ಳವರು ಈ ಬಗೆಯಾಗಿ ಇವರು ಕಲೆಯುವ ಅವಕಾಶ ದೊರೆಯಬಾರ ದೆಂದು ಅಸೂಯೆಯಿಂದ ಅವಳ ಗಂಡ, ಅವಳೊಂದಿಗೆ ದೂರ ಹೊರಟು ಹೋದ. ಹೇರಳವಾದ ನವಸುಂದರಿಯರ ಪರಿಚಯವಾಗುವ ಪ್ಯಾರಿಸ ನಗರದಲ್ಲಿ, ಕಾಲಾಂತರದಲ್ಲಿ ಅವಳ ನೆನಪೂ ಲ್ಯಾಮರಿನ್ನನಿಗೆ ಬಹಳ ಆಗು ತ್ತಿರಲಿಲ್ಲ. ಮದುವೆಯಾಗದೇ ಹೆಸರಿಗೆ ಬ್ರಹ್ಮಚಾರಿಗಳಂತಿರುವ ಇಂತಹ ಶ್ರೀಮಂತರಿಗೆ ಇದೇ ರೂಢಿಯಾಗಿತ್ತು ಆದರೆ ಇವನಿಗೆ ಲಿಸ್ಸೀಯಲ್ಲಿ ಮಾತ್ರ ಪ್ರೇಮ ಕಡಿಮೆಯಾಗಲಿಲ್ಲ ಅವಳ ಪರಿಚಯು ಬೇಗ ಮರೆಯುವಂತಹ ದಲ್ಲ. ಇಂದು ಅವಳ ಕಡೆಯಿಂದ ಬಂದ ಈ ಪ್ರೇಮದ ಕರೆ, ಅವನಿಗೆ ಹೆಚ್ಚು ಹರುಷವನ್ನು ತಂದೊಡ್ಡಿತು.

" ಸಂದೇಹವೇನು ? ಅವಳಲ್ಲಿ ಈ ಸಂಜೆ ಊಟಕ್ಕೆ ಹೋಗುವೆನು." ಎಂದು ತನ್ನಷ್ಟಕ್ಕೆ ತಾನೇ ಒಟಗುಟ್ಟಿದ.

ಎದ್ದವನೇ ತನ್ನ ಅಲಂಕಾರದ ಕೋಣೆಗೆ ಹೋಗಿ, ನಿಲುವುಗನ್ನಡಿಯ ಮುಂದೆ ನಿಂತು, ತನ್ನ ಪೂರ್ಣಾಕಾರವನ್ನು ನೋಡಿಕೊಳ್ಳುತ್ತ, "ಅವಳು ತನ ಗಿಂತಲೂ ಮುದುಕಿಯಾಗಿರಬಹುದೆ ? " ಎಂದು ಯೋಚಿಸಿದ. ತಾನಿನ್ನೂ ಯುವಕನಂತೆ ಕಾಣುವೆನೆಂಬ ಹೆಮ್ಮೆ, ಅವನಲ್ಲಿ ಹೆಚ್ಚಿನ ಉತ್ಸಾಹವನ್ನುಂಟು ಮಾಡಿತು.

ದಿನವೆಲ್ಲ ಬಹು ನಿಧಾನವಾಗಿ ಸಾಗುತ್ತಿರುವಂತೆನಿಸಿತು. ಅವನಲ್ಲಿ ಕಂಡುಬಂದ ಹೆಚ್ಚಿನ ಉತ್ಸಾಹದ ಕಾರಣವು, ಅವನ ಮನೆಯಾಳುಗಳಿಗೆ ಅರ್ಥವಾಗಲಿಲ್ಲ. ಸಂಜೆ ಆಮಂತ್ರಣದ ಮೇಲೆ ಊಟಕ್ಕೆ ಹೊರಗೆ

ಹೋಗುವೆನೆಂದು ಅಡುಗೆಯ ಬಟ್ಲರನಿಗೆ ಹೇಳಿದಾಗ ಅವನ ಉತ್ಸಾಹದ ಕಾರಣವನ್ನು ಊಹಿಸಿ, ಮಾರನೆಯ ದಿನ ತಮಗೇನಾದರೂ ಹೆಚ್ಚಿನ ಪಾರಿತೋಷಕ ಸಿಗಬಹುದೆಂದು ಅವರೂ ಹಿಗ್ಗಿದರು. ಬಹು ಪ್ರೀತಿಯ ಬಿಳಿಯ ಕೋಟನ್ನು ಧರಿಸಿ ವೇಳೆಗೆ ಮುಂಚಿತವಾಗಿಯೇ ಅವಳ ಮನೆಗೆ ಹೊರಟ.

ಅವಳ ಕೋಣೆಯನ್ನು ಪ್ರವೇಶ ಮಾಡಿದ ಕೂಡಲೇ ತನ್ನ ಬಹಳ ಹಳೆಯ ಫೋಟೋ ಗೋಡೆಯಮೇಲೆ ಸಿಲ್ಕಿನ ಕಟ್ಟಿನಲ್ಲಿ ತೂಗ ಹಾಕಿರುವುದನ್ನು ಕಂಡ, ಹರ್ಷಿತನಾದ ಅಲ್ಲಿಯ ಆಸನ ಒಂದರಲ್ಲಿ ಕುಳಿತ. ಅಷ್ಟರಲ್ಲಿ ಹಿಂದಿನ ಬಾಗಿಲನ್ನು ತೆಗೆದು ತನ್ನೆದುರು ಬರುತ್ತಿದ್ದ ಓರ್ವ ಬಿಳಿ ಕೂದಲಿನ ಹೆಣ್ಣು ವ್ಯಕ್ತಿಯನ್ನು ಕಂಡ ಅವಳು ಕೋಣೆಯೊಳಗೆ ಬರುತ್ತ ತನ್ನೆರಡು ಕೈಗಳನ್ನು ಮುಂದೆ ಚಾಚಿದಳು ಲಾಮರಿನ್ನನು ಬೇಗನೆದ್ದು ಆ ವೃದು ಹಸ್ತಗಳನ್ನು ಅನೇಕ ಸಲ ಮುದ್ದಿಸಿದ ತಾನಿಂದು ಪ್ರೀತಿಸಿದ ಸ್ತ್ರೀ, ಯಾವ ಸ್ಥಿತಿಗೆ ಬಂದಿರುವಳೆಂದು ವಿಸ್ಮಯಗೊಂಡ. ಇವಳೇ ಅವಳಿರಲಾರಳೆಂಬ ಸಂಶಯಗೊಂಡ ಅವನ ಆಶ್ಚರ್ಯ ಸೂಚಕ ಕಣ್ಣುಗಳನ್ನು ಕಂಡು ಅವಳು ಮೊದಲು ನಕ್ಕಳು. ಮರುಕ್ಷಣದಲ್ಲಿಯೇ ಬಿಕ್ಕಿ ಬಿಕ್ಕಿ ಅಳತೊಡಗಿದಳು

ಅವಳನ್ನು ಸಮೀಪಿಸಿ, "ಇದೇನು ಲೆಸ್ಸೀ ನಿನ್ನ ...?" ಎಂದು ವಾಕ್ಯವನ್ನು ಮುಗಿಸುವಷ್ಟರಲ್ಲಿ,

"ಅಹುದು. ನಾನೇ. ನೀನು ಕಂಡು ನಂಬಲಾರದಂತಹ ಸ್ಥಿತಿಗೆ ಬಂದಿರುವ ನಿನ್ನ ಲೆಸ್ಸಿಯೇ, ನಾನು ಅನೇಕ ಬಗೆಯ ದುಃಖಗಳು ಬಂದು ನನ್ನನ್ನು ಈ ಸ್ಥಿತಿಗೆ ತಂದುಬಿಟ್ಟವೆ. ನೀನಿನ್ನೂ ಸುಂದರವಾಗಿ ಕಾಣುವಿ; ಕುಳಿತುಕೋ. ನಿನ್ನನ್ನು ನೋಡಿ ನನಗೆ ಬಹಳ ಉತ್ಸಾಹ ಉಕ್ಕೇರಿ ಬರುತ್ತಿದೆ ಕೊಂಚ ಸಮಯ ಕುತೂಹಲದಿಂದ ಮಾತನಾಡುವಾ. ಅನಂತರ ನನ್ನ ಮಗಳನ್ನು ನಿನಗೆ ಪರಿಚಯ ಮಾಡಿಕೊಡುವೆ ಅವಳು ಎಲ್ಲ ವಿಧದಲ್ಲಿಯೂ ನನ್ನನ್ನೇ ಹೋಲುತ್ತಾಳೆ. ನಾನು ಯುವತಿಯಾಗಿದ್ದಾಗ ಇದ್ದ ಹೋಲಿಕೆಯೇ ಅವಳದಾಗಿದೆ. ನಿನ್ನನ್ನು ನಾನು ಇಷ್ಟು ದಿನಗಳ ನಂತರ ಕಂಡರೆ ಪ್ರೇಮಾವೇಶದಿಂದ ನಿನ್ನೊಂದಿಗೆ ಏನಾದರೂ ಸಲಿಗೆಯ ವ್ಯವಹಾರ ನಡೆಸಿದರೆ ಇಲ್ಲವೇ ಮಾತಿನಲ್ಲಿ [illegible] ಪ್ರೇಮ ವ್ಯಕ್ತವಾದರೆ ಅದು ನನ್ನ ಮಗಳಿಗೆ ತಿಳಿಯಬಾರದೆಂದು, ಮೊದಲಿಗೆ ನಾನೊಬ್ಬಳೇ

ನಿನ್ನನ್ನು ಕಂಡು ಮಾತನಾಡಬೇಕೆಂದು ಬಯಸಿದೆ; ಕುಳಿತುಕೋ ನನ್ನಲ್ಲಿ ಇನ್ನು ಯಾವ ಆವೇಶವೂ ಬರುವ ಹಾಗಿಲ್ಲ "

ಆತನು, ಅವಳ ಕೈಗಳೆರಡನ್ನು ಹಿಡಿದುಕೊಂಡೇ ದೊಡ್ಡ ಮಂಚದ ಮೇಲೆ ಅವಳ ಬದಿಯಲ್ಲಿ ಕುಳಿತುಕೊಂಡ. ಎಲ್ಲವನ್ನೂ ನೆನೆದುಕೊಂಡ ಅತಿ ಚಲುವೆಯೂ ಮನಮೋಹಕ ಕುರುಳುಗಳಿಂದಲೂ ಸುಂದರವಾಗಿ ಅರಳಿದ ಕಣ್ಣುಗಳಿಂದಲೂ ಇಡೀ ಪ್ಯಾರಿಸ ನಗರದ ಸ್ತ್ರೀಯರಲ್ಲೇ ಅತಿ ಲಾವಣ್ಯವತಿಯೆನಿಸಿಕೊಂಡವಳೂ ಆದ ತನ್ನ ಲಿಸ್ಸಿಯೇ ಇವಳೆಂದು ನಂಬುವದಕ್ಕೆ ಅವನಿಗೆ ಅಸಾಧ್ಯವೆನಿಸುನುತಿತ್ತು

ನೊಂದ ಮನಸ್ಸಿನಿಂದ ಅತಿ ದುಃಖದಿಂದ ಇಬ್ಬರೂ ಸ್ವಲ್ಪ ಸಮಯ ಸುಮ್ಮನೇ ಕುಳಿತುಬಿಟ್ಟರು

ಅನಂತರ "ಮಗಳನ್ನು ಕರೆಯುತ್ತೇನೆ." ಎಂದವಳೇ ಲಿಸ್ಸಿಯು ಹತ್ತಿರವೇ ಇದ್ದ ಬೆಲ್ಲಿನ ಗುಂಡಿಯನ್ನೊತ್ತಿದಳು.

ಮೊದಲಿಗೆ ಬಾಗಿಲು ತಟ್ಟಿದಂತೆ ಸಪ್ಪಳವಾಯಿತು ಅನಂತರ ಬಾಗಿಲು ಮೆಲ್ಲನೆ ತೆಗೆದು "ಇದೋ ಬಂದಿರುವೆನಮ್ಮಾ" ಎಂಬ ಸಲುಗೆಯ ಮಾತಿನೊಂದಿಗೆ ಅವಳ ಮಗಳಾದ ರೀನೀ ಬಂದಳು

ಅವಳನ್ನು ನೋಡಿದ ಕೂಡಲೇ ಲ್ಯಾಮರಿನ್ ಆಶ್ಚರ್ಯಚಕಿತನಾದ. ಅಂದು, ಇಪ್ಪತ್ತೈದು ವರುಷಗಳ ಹಿಂದೆ ಅತಿ ಲಾವಣ್ಯವತಿಯಾಗಿ ಕಂಡು ಬಂದ ಲಿಸ್ಸಿಯೇ ತನ್ನೆದುರು ಒಂದು ನಿಂತಿರುವಳೆಂದು ಭಾವಿಸಿದ. ಏನು ಮಾಡಬೇಕೆಂಬುದು ತೋಚದೇ ಎದ್ದು ನಿಂತು "ಪ್ರಣಾಮಗಳು ಇತ್ತ ಬರಬೇಕೆ"ಂದು ಮರ್ಯಾದೆ ಸೂಚಕ ಮಾತನಾಡಿದ ಅವನಿನ್ನೂ ಗೊಂದಲದಲ್ಲೇ ಇರುವಾಗ, ಮನೆಯ ಸೇವಕನು ಬಂದು "ಅಡುಗೆ ತಯಾರಾಗಿದೆ ದಯವಿಟ್ಟು ಒಳಗೆ ಬರಬೇಕು" ಎಂದು ಸೂಚಿಸಿದ. ಕನಸಿನ ಸಾಮ್ರಾಜ್ಯದಲ್ಲಿದ್ದ ಲ್ಯಾಮರಿನ್ನನು ಸ್ವಲ್ಪ ಚೇತರಿಸಿಕೊಂಡೆದ್ದು ನಿಂತು ಊಟನ ಮನೆಗೆ ಅವರ ಹಿಂದೆ ನಡೆದ

ಊಟದ ಸಮಯದಲ್ಲೇನು ನಡೆಯಿತು, ತಾನೇನು ಮಾತನಾಡಿದ, ಏನನ್ನು ಊಟ ಮಾಡಿದೆ, ಮುಂತಾದ ಎಲ್ಲ ವಿಷಯಗಳೂ ಅವನಿಗೆ ಕನಸಿನಲ್ಲಿ ನಡೆದಂತೆನಿಸಿತು. ಒಂದೇ ಹೋಲಿಕೆಯಲ್ಲಿ ತನ್ನ ಮುಂದೆ ಕುಳಿತಿದ್ದ

ತೆ ಸ್ತ್ರೀಯರಲ್ಲಿ ತನ್ನ ಲಿಸ್ಸೀ ಯಾರೆಂಬುವುದನ್ನು ತಿಳಿಯದೇ ಭ್ರಮೆ ಗೊಂಡಿದ್ದ ಯುವತಿಯಾದ ರೀನೀಯ ಲಾವಣ್ಯ ಅವನನ್ನು ಹುಚ್ಚು ಹಿಡಿಸಿದ್ದಿತು.

ಊಟದ ವೇಳೆಯಲ್ಲಿ ಇವನಲ್ಲಾದ ವ್ಯತ್ಯಾಸವನ್ನು ಮನೆಯ ಯಜ ಮಾನಿಯಾದ ಲಿಸ್ಸೀಯು ಗಮನಿಸಿದ್ದಳು ಅದರ ಕಾರಣವನ್ನೂ ಊಹಿಸಿ ದ್ದಳು " ಹೀಗೇಕೆ ಮಂಕು ಹಿಡಿದವರಂತೆ ವರ್ತಿಸುವಿರಿ? ನಿಮ್ಮಲ್ಲಿ ಈಗ ಮೊದಲಿಗೆ ನಾನು ಕಂಡ ಚುರುಕುತನ ಕಂಡುಬರುವುದಿಲ್ಲ ಹೀಗೇಕೆ ಮಹಾಶಯರೆ?" ಎಂದು ಮಮತೆಯಿಂದ ಕೇಳಿದಳು.

ಅವನು " ಅಹುದು. ಇಂದು ನಾನು ಬುದ್ಧಿಯನ್ನು ಮಾತ್ರವೇ ಕಳೆದು ಕೊಂಡಿಲ್ಲ ಅದರ ಜತೆಗೆ ಇನ್ನೂ ಅನೇಕ ವಸ್ತುಗಳನ್ನೂ ಕಳೆದುಕೊಂಡಿರು ವೆನು" ಎಂದು ಹೇಳಿದನು

ಊಟದ ನಡುವೆ ಅವನು ಆ ಸ್ತ್ರೀಯರಿಬ್ಬರು ಆಡುವ ಮಾತುಗಳಿಗೆ ಗಮನಕೊಡದೆ, ಅವರೀರ್ವರನ್ನೂ ಎವೆ ಇಕ್ಕದೆ ನೋಡುತ್ತಿದ್ದನು. ರೀನೀಯ ಎಲ್ಲ ನಡತೆಗಳೂ ಮೊದಲಿಗೆ ಯುವತಿಯಾದ ಲಿಸ್ಸೀಯಲ್ಲಿ ಕಂಡ ನಡತೆ ಗಳಂತೆ, ಚಾಚೂ ತಪ್ಪದೇ ಒಂದಕ್ಕೊಂದು ಹೊಂದಿಕೊಂಡಿದ್ದವು. ತನಗೆ ವಯಸ್ಸಾದರೂ ರೀನೀಯೊಡನೆ ಮತ್ತೆ ಅದೇ ಪ್ರವಾಹದಲ್ಲಿ ಪ್ರೀತಿನೌಕೆ ಯನ್ನು ನಡೆಸಬಲ್ಲೆನೆಂಬ ಉತ್ಸಾಹ ಅವನಲ್ಲಿ ತಲೆದೋರಿತು.

ಆದರೂ ಸ್ವಲ್ಪ ವಿವೇಚನೆಯಿಂದ ಊಟದ ಸಮಯದಲ್ಲಿ ದುಡುಕ ಲಿಲ್ಲ. ತನ್ನ ಉದ್ವೇಗವನ್ನು ಪೂರ್ಣ ಹಿಡಿತದಲ್ಲಿಟ್ಟುಕೊಂಡು, ರಾತ್ರಿ ಬಹಳ ವೇಳೆ ಅಲ್ಲಿ ನಿಲ್ಲದೆ ಬೋಲಿವಾರ್ಡ ತೋಪಿನ ಮಾರ್ಗವಾಗಿ ಮನೆಯ ಹಾದಿ ಹಿಡಿದ. ರೀನೀಯ ಮೋಹಕ ರೂಪ ಕ್ಷಣಕ್ಷಣಕ್ಕೆ ಎದುರು ಬಂದು ನಿಲ್ಲು ತ್ತಿತ್ತು. ಏನೇನೋ ಪೇಚಾಡುತ್ತ ಮನೆಯನ್ನು ಸೇರಿದ ಮೌನದಿಂದ ಬಡುಕಿನ ಮುಖದಿಂದ, ಮನೆಯನ್ನು ಪ್ರವೇಶಿಸಿದುದು, ಸೇವಕನಿಗೂ ಆಶ್ಚರ್ಯವೆನಿಸಿತು.

ಪಡಸಾಲೆಯಿಂದ ಮಲಗುವ ಕೋಣೆಗೆ ಹೋಗುವಾಗ, ಕೈಯಲ್ಲಿ ಹಿಡಿದುಕೊಂಡಿದ್ದ ಮೇಣಬತ್ತಿಯ ದೀಪದ ಬೆಳಕಿನಲ್ಲಿ ಎದುರಿಗೆ ಗೋಡೆ ಯಲ್ಲಿ ತೂಗುಹಾಕಿದ ದೊಡ್ಡ ಕನ್ನಡಿಯಲ್ಲಿ ಕಂಡುಬಂದ ತನ್ನ

ಪ್ರತಿಬಿಂಬ, ಇವನ ನಡೆಯನ್ನು ತಡೆಯಿತು ಅದರ ಹತ್ತಿರ ಹೋಗಿ ದೀಪದ ಬೆಳಕಿನಲ್ಲಿ ತನ್ನ ರೂಪವನ್ನು ಪರೀಕ್ಷೆ ಮಾಡಿಕೊಂಡ ಬಹು ಸೂಕ್ಷ್ಮ ರೀತಿಯಲ್ಲಿ ಪರೀಕ್ಷಿಸಿದಾಗ ಅವನ ತಲೆಯಲ್ಲಿಯ ನರೆತ ಕೂದಲು, ಮುಖ ದಲ್ಲಿ ಮೂಡಿಕೊಂಡ ನಿರಿಗೆಗಳು, ತನ್ನ ನಿಜಸ್ಥಿತಿ ಏನೆಂಬುದನ್ನು ತೋರಿಸಿ ಕೊಟ್ಟವು

ಅವನಲ್ಲಿ ಉಕ್ಕೇರಿಬಂದ ಉತ್ಸಾಹವೆಲ್ಲವೂ ಆ ದೃಶ್ಯದಿಂದ ಮಾಯ ವಾಯಿತು ನಿರಾಶೆಯಿಂದ ಅವನ ಮುಖವು ಕಪ್ಪಿಟ್ಟಿತು ನಿಲ್ಲಲು ಅವನಲ್ಲಿ ಶಕ್ತಿ ಇರಲಿಲ್ಲ ಬಿಸಿಯುಸಿರಿನಿಂದ ಅಲ್ಲಿಯೇ ಹತ್ತಿರದಲ್ಲಿದ್ದ ಆರಾಮ ಕುರ್ಚಿಯ ಮೇಲೆ "ಲ್ಯಾಮರಿನ್ಸ್, ನಿನ್ನದೆಲ್ಲವೂ ಮುಗಿಯಿತು" ಎಂದು ಗುಣಗುಟ್ಟುತ್ತ ಕುಸಿದುಬಿದ್ದ

( —All Over )

# ಸೋಲು

ಅವನೋರ್ವ ಶ್ರೀಮಂತ. ಮನೆತನದ ಆಸ್ತಿಪಾಸ್ತಿ ಇದ್ದರೂ, ಸುಖ ಭೋಗದ ಜೀವನದ ಸವಿಯ ಮೋಹಕ್ಕೆ ಮನಸೋತು, ತನ್ನ ದೇಸಗತ್ತಿಯನ್ನು ತೊರೆದು ಯುದ್ಧದ ಸಮಯದಲ್ಲಿ ಸೈನ್ಯದಲ್ಲಿ ಸೇರಿದ್ದ ಅವನ ಅಂತಸ್ತಿಕೆಗೆ ಸಾಕಷ್ಟು ಶಾಲೆಯ ವರೆಗೆ ಹೋಗದಿದ್ದರೂ ಮನೆಯವರ ಒತ್ತಾಯದ ಪರಿಣಾಮವಾಗಿ ಮ್ಯಾಟ್ರಿಕ್ ಮುಗಿಸಿದ್ದ ಸೈನ್ಯದಲ್ಲಿ, ಉತ್ತಮ ಕೆಲಸ ಮಾಡಿ, ಹೆಸರು ಗಳಿಸಿದ್ದ. ಆದರೆ ದುರ್ದೈವದಿಂದ ಹೃದಯರೋಗದ ನೆವದಿಂದ ಅವನು ಕೆಲಸದಿಂದ ನಿವೃತ್ತನಾದ. ವಯಸ್ಸಿನ್ನೂ ನಾಲ್ವತ್ತಕ್ಕೆ ಮೀರಿರಲಿಲ್ಲ. ಮನೆಯವರು ಮದುವೆಯಾಗೆಂದು ಒತ್ತಾಯ ಮಾಡಿದರೂ, ಈ ಬಂಧನಕ್ಕೆ ಸಮ್ಮತಿಸಲಿಲ್ಲ ಸ್ವೇಚ್ಛೆಯಿಂದ ಇರುವುದೇ ಇವನಿಗೆ ಬೇಕಾಗಿತ್ತು.

ವ್ಯಾಮೋಹಕ್ಕೆ ಒಳಗಾಗುವುದು ಮಾನವನ ಲಕ್ಷಣ. ಆದರೆ ಕಾಮ ಪ್ರೇರಿತ ವ್ಯಾಮೋಹದಲ್ಲಿ ಮನುಷ್ಯನು ಸಿಕ್ಕಿಕೊಂಡನೆಂದರೆ, ಅವನಿಗೆ ವಿವೋಚನೆಯೇ ಇರುವುದಿಲ್ಲ. ಅದರ ಪರಿಣಾಮದಿಂದ ಬಹಳ ದುಃಖಕ್ಕೀಡಾಗ ಬೇಕಾಗುವುದು; ಇದು ಸಾವಿಗಿಂತಲೂ ಅಸಹನೀಯವೆಂದು ತಿಳಿದವರ ಅಭಿಪ್ರಾಯ. ಈ ಜಾತಿಗೆ ಸೇರಿದವರಲ್ಲೊಬ್ಬ ನಮ್ಮ ಈ ನಿವೃತ್ತ ಸೈನ್ಯಾಧಿಕಾರಿ.

ವಿರಾಮ ಕಾಲದಲ್ಲಿ ಈತನು ಯಾವಾಗಲೂ, ಎಲ್ಲಿ ಸಭೆ, ಜಾತ್ರೆ, ಸಮ್ಮೇಲನ, ಪ್ರದರ್ಶನಗಳು ನಡೆದವೆಂದರೆ ಉದ್ವೇಗದಿಂದ ಅಲ್ಲಿರುತ್ತಿದ್ದ. ಹಣವನ್ನು ನೀರಿನಂತೆ ಖರ್ಚು ಮಾಡುತ್ತಿದ್ದ ದೇಶದ ನಾನಾ ಪ್ರದರ್ಶನಗಳಿಗೆ ತಪ್ಪದೇ ಹೋಗಿಬರುತ್ತಿದ್ದ. ಅಲ್ಲಿ ನೆರೆಯುವ ನಾನಾ ಬಗೆಯ ಹೆಂಗಳೆಯರ ಮನಮೋಹಕ ರೂಪವನ್ನು ಕಂಡೂ ಸಂತೋಷಪಡುವುದರಲ್ಲಿ ಇವನಿಗೆ ಹೆಚ್ಚಿನ ಆಸಕ್ತಿ.

ಒಂದು ದೊಡ್ಡ ನಗರದಲ್ಲಿ ಪ್ರದರ್ಶನವೇರ್ಪಡಿಸಲಾಗಿತ್ತು. ನಾನಾ ಬಗೆಯ ವಿಲಾಸಿಗಳ ತವರೂರಾದ ಆ ನಗರದಲ್ಲಿ ಸುಂದರ ಸ್ತ್ರೀಯರಿಗೇನು ಕಡಿಮೆ? ಶ್ರೀಮಂತರ ಮನೆತನದವರೂ, ದೊಡ್ಡ ಅಧಿಕಾರಿಗಳ ಮನೆಯ

ವರೂ, ರಾಜಮಹಾರಾಜರ ಮನೆಯವರೂ ಪ್ರದರ್ಶನಕ್ಕೆ ಬರುತ್ತಿರುವುದು ರೂಢಿಯಾಗಿತ್ತು. ದಿನವೂ ಪ್ರದರ್ಶನಕ್ಕೆ ಸಂಜೆ ಐದು ಗಂಟೆಗೆ ಹೋಗಿ, ಏಳರ ಸಮಯಕ್ಕೆ ಕಾಫಿ ಕುಡಿಯಲು ಹೋಟಲಿಗೆ ಬರುವುದು ಈತನಿಗೆ ರೂಢಿಯಾಗಿತ್ತು

ದಿನವೂ ಇವನು ಹೋಗುತ್ತಲಿದ್ದ ಪ್ರದರ್ಶನಕ್ಕೆ ಓರ್ವ ಸಿನೆಮಾ ನಟಿಯು ತಾನು ಮದುವೆ ಮಾಡಿಕೊಂಡ ಇನಿಯನೊಂದಿಗೆ ಬರುವುದನ್ನು ನೋಡಿದ್ದ. ಇವನ ಹೆಸರು ಆಗಲೇ ತಿಳಿದಿದ್ದ ಈ ನಟಿಗೂ ಇವನಾರೆಂಬುದು ತಿಳಿದಿತ್ತು; ಆದರೂ ಪರಸ್ಪರ ಮಾತನಾಡುವ ಹವ್ಯಾಸಕ್ಕೆ ಹೋಗಿರಲಿಲ್ಲ ಇವನ ತುಂಟತನಕ್ಕೆ ತಕ್ಕ ಶಾಸ್ತಿಮಾಡಿ, ಅವನಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿ ಆ ಸಮಯಕ್ಕಾಗಿ ಅವಳೂ ಕಾದಿದ್ದಳು.

ಎಂದಿನಂತೆ ಅಂದೂ ಪ್ರದರ್ಶನದಲ್ಲಿ ವಿವಿಧವಸ್ತುಗಳನ್ನು ನೋಡುತ್ತಿರುವಾಗ, ಬೆಲೆಬಾಳುವ ಕಾಶ್ಮೀರ ಶಾಲನ್ನು ನೋಡಿ ಆ ನರ್ತಕಿಯು ತನ್ನ ತಾಯಿಯ ಕಡೆಗೆ ತಿರುಗಿ "ಅದೆಂತಹ ಉತ್ತಮ ಶಾಲು, ಇದನ್ನು ನಾವು ಕೊಂಡುಕೊಳ್ಳಬೇಕು" ಎಂದಳು ಪಕ್ಕದಲ್ಲಿ ನಿಂತಿದ್ದ ಈ ನಿವೃತ್ತ ಸೈನ್ಯಾಧಿಕಾರಿ ಆಕೆಯನ್ನುದ್ದೇಶಿಸಿ "ನಿಮಗೆ ಸಂಕೋಚವೆನಿಸದಿದ್ದರೆ ತಾವು ಕೊಳ್ಳಬಹುದು ಅದನ್ನು ನನ್ನ ಸ್ನೇಹದ ನೆನಪಿಗೆಂದು ತಮಗೆ ಬಹುಮಾನವಾಗಿ ಕೊಡುವೆನು" ಎಂದು ನಗುತ್ತ ಹೇಳಿದನು.

"ಇದೇನು ನಿಮ್ಮ ವರ್ತನೆ? ನೀವಾರೆಂಬುವುದು ನನಗೆ ತಿಳಿಯದು. ಪರಸ್ತ್ರೀಯರೊಂದಿಗೆ ನೀವೀರೀತಿ ಸಲುಗೆಯಿಂದ ವರ್ತಿಸಬಹುದೆ?"

"ತಾವು ಸಿನೆಮಾ ನಟಿ ಎಂಬುದೂ, ತಮ್ಮ ಬಗ್ಗೆ ಇತರ ವಿವರಗಳೂ ನನಗೆ ತಿಳಿದಿವೆ ಅದೇನೇ ಇರಲಿ ನಿಮ್ಮ ಮೇಲೆ ನನಗಿರುವ ಪ್ರೀತಿಗಾಗಿ ನಿಮ್ಮೊಂದಿಗೆ ಈ ರೀತಿ ಮಾತನಾಡಿದೆ" ಎಂದು ಅವಸರದಲ್ಲಿ ಹೇಳಿದ. "ಸಿನೆಮಾ ನಟಿಯಾದ ಮಾತ್ರಕ್ಕೆ ನಮಗೆ ಮಾನ ಮರ್ಯಾದೆಗಳಿರಬಾರದೆ? ಮನೆತನದವರಂತೆ ನಾವು ಮದುವೆಯಾಗಿ ಜೀವಿಸಬಾರದೆ?"

"ಅದು ನನಗರ್ಥವಾಗುವ ವಿಷಯವಲ್ಲ ನಿಮ್ಮ ಚೆಲುವಿಕೆಗೆ ನಾನು ಮೋಹಗೊಂಡಿರುವೆ. ನನ್ನ ಸ್ಥಿತಿ ಹುಚ್ಚನಂತಿರುವುದು. ನನ್ನ ಪ್ರೀತಿಯ ಈ ಕರೆಯನ್ನು ತಾವು ನಿರಾಕರಿಸಬಾರದು" ಎಂದು ದೈನ್ಯದಿಂದ ಬೇಡಿದನು

ಇವನಿಗೆ ಚನ್ನಾಗಿ ಬುದ್ಧಿ ಕಲಿಸಬೇಕೆಂದು ಅವಳು ಮಾಡಿದ ಸಂಕಲ್ಪ ನೆರವೇರಲು ಇಂದು ಸಮಯ ದೊರೆತುದಕ್ಕೆ ಒಳಗೇ ಹಿಗ್ಗಿದಳು. ಅದನ್ನು ಪೂರ್ಣ ತೋರಗೊಡದೇ ಮಂದಹಾಸದಿಂದ ಅವನ ಕಡೆ ನೋಡಿದಳು. ಸ್ವಲ್ಪ ತಡೆದು "ಆದರೆ ನಿಮ್ಮ ಪ್ರೀತಿಯ ಆಳವನ್ನು ಪರೀಕ್ಷಿಸುವುದಕ್ಕೆ-ನೀವು ನನ್ನ ಕರಾರಿಗೊಪ್ಪಿಕೊಳ್ಳಬೇಕು"

"ನಿಮ್ಮ ಕರಾರುಗಳೇನು?"

"ನಾಳೆ ಸಂಜೆ ನೀವು ನಮ್ಮ ಮನೆಗೆ ಬರಬೇಕು, ಜತೆಯಲ್ಲಿ ಯಾರೂ ಇರಬಾರದು ಕೈಗಳನ್ನು ಕಟ್ಟಿ ಛೊರಡಾದಿಂದ ಇಪ್ಪತ್ತೈದು ಸಲ ನಿಮ್ಮ ಬೆನ್ನು ಮೇಲೆ ಹೊಡೆಯುವೆನು ಇಪ್ಪತ್ತೈದನೆಯ ಪೆಟ್ಟು ಬಿದ್ದನಂತರ ನಾನು ನಿಮ್ಮ ವಶಕ್ಕೆ ಒಳಗಾಗುವೆನು. ಸಮ್ಮತವೆ?"

"ಇದೇನಂತಹ ಕರಾರು? ಇದಕ್ಕೆ ನನ್ನ ಸಮ್ಮತಿ ಇದೆ ನಾಳೆ ಸಂಜೆ ಸರಿಯಾದ ಸಮಯಕ್ಕೆ ಬರುವೆನು"

ಇವನ ಹುಚ್ಚು ವರ್ತನೆಗೆ ತುಸು ನಕ್ಕು, ಮನೆಗೆ ಹೋಗಿ ತನ್ನ ಗುಪ್ತ ಯೋಚನೆಯನ್ನೂ ಗಂಡನಿಗೆ ಹೇಳಿದಳು ಮಾರನೆಯ ದಿನ ನಿಯಮಿತ ವೇಳೆಗೆ ಆ ಅಧಿಕಾರಿ, ಪ್ರದರ್ಶನದಲ್ಲಿ ಕಾಶ್ಮೀರ ಶಾಲನ್ನು ಬೆಲೆಗೆ ತೆಗೆದು ಕೊಂಡು ಅತ್ಯಂತ ಉತ್ಸಾಹದಿಂದ ಆ ನಟಿಯ ಮನೆಗೆ ಬಂದು ಸೇರಿದ ಬಾಗಿಲಲ್ಲೇ ಇವನನ್ನು ಎದುರುಗೊಂಡು ತನ್ನ ಕರಾರುಗಳನ್ನು ಮತ್ತೆ ವಿವರಿಸಿದಳು

ಕರಾರಿನಂತೆ ಅವನ ಕೈಗಳು ಹಿಂದಿನಿಂದ ಕಟ್ಟಲ್ಪಟ್ಟವು ಯಾವ ಬಗೆಯ ಕರುಣೆಯನ್ನು ತೋರದೆ ಛೋರಡಾದಿಂದ ಹೊಡೆಯತೊಡಗಿದಳು. ಪೆಟ್ಟುಗಳು ಬಿದ್ದಂತೆಲ್ಲ ಅವುಗಳ ನೋವಿಗೆ ಆಗುವ ನೋವು ಅವನ ಮುಖ ದಲ್ಲಿ ಕಂಡುಬರುತ್ತಿತ್ತು ಇಪ್ಪತ್ತುನಾಲ್ಕು ಹೊಡೆತಗಳು ಅವನ ಬೆನ್ನು ಮೇಲೆ ಬಿದ್ದನಂತರ ತನ್ನ ಕೈಯಲ್ಲಿಯ ಛೊರಡಾವನ್ನು ಕೆಳಗೆ ಹಾಕಿದಳು

"ಇನ್ನೊಂದು ಹೊಡೆತದ ನಂತರ ನೀನು ನನ್ನವಳಾಗುವಿ ತಾನೆ?" ಎಂದು ಕೇಳಿದನು ಅವನ ಮಾತಿನಲ್ಲಿ ನೋವಿನ ಧ್ವನಿ ಕಂಡು ಬಂದರೂ ಮುಖದಲ್ಲಿ ಗೆಲುವಿನ ನಗುವು ಕಂಡುಬರುತ್ತಿತ್ತು

"ಯಾರಿಲ್ಲವೆನ್ನುವರು ನಿನ್ನ ಬೆನ್ನು ಮೇಲೆ ಇಪ್ಪತ್ತೈದನೆಯ

ಹೊಡೆತ ಬಿದ್ದಮೇಲೆ ತಾನೇ ನಾನು ನಿಮ್ಮವಳಾಗುವದು. ಈಗ ಇಪ್ಪತ್ತು ನಾಲ್ಕು ಸಲ ಧಳಿಸಿದುದಾಯಿತು. ಆದುದರಿಂದ ಈಗ ನಾನು ನಿಮ್ಮವಳಲ್ಲ ನಿಮಗೆ ಇಪ್ಪತ್ತೈದನೆಯ ಹೊಡೆತವನ್ನು ಕೊಡಲೂ ನನಗೆ ಸಮ್ಮತಿ ಇಲ್ಲ. ಮುಂದೇನೆಂಬುವುದನ್ನು ಇಲ್ಲಿಯೇ ನಿಂತಿರುವ ಸಾಕ್ಷಿಗಳೇ ನಿರ್ಧರಿಸಲಿ" ಎಂದು ತೆರೆಯ ಮರೆಯಲ್ಲಿ ನಿಂತಿರುವ ತನ್ನ ಗಂಡನನ್ನು ಮತ್ತು ಇತರ ಮಿತ್ರರನ್ನೂ ಕರೆದಳು ಅವಳು ಮತ್ತೆ ಮಾತನ್ನು ಮುಂದುವರಿಸುತ್ತ "ಮಹಾರಾಯರೇ, ನಿಮ್ಮ ಈ ವರ್ತನೆಗೆ ನಾಚಿಗೆ ಬರಲೆಂದೇ ನಾನು ಮನಃಪೂರ್ವಕ ಈ ಮೋಸದ ಬಲೆಯನ್ನು ಬೀಸಿದೆ ಇನ್ನು ಮುಂದಾದರೂ ನಿಮ್ಮ ವರ್ತನೆಯನ್ನು ಬದಲಾಯಿಸಿ ಮದುವೆಯಾಗಿ ಇತರ ಸ್ತ್ರೀಯರನ್ನು ಬಯಸದೆ ಸುಖದಿಂದ ಇರುವಿರೆಂದು ತಿಳಿಯುತ್ತೇನೆ" ಎಂದಳು.

ಬಾಗಿದ ಮುಖವನ್ನು ಆತನು ಎತ್ತದಲೇ ಮನೆಯಿಂದ ಹೊರಬಿದ್ದ "ನಾನು ಸೋತುಹೋದೆ" ಎಂಬ ಮಾತುಗಳು ಅವನಿಂದ ಹೊರಬಿದ್ದವು. ಒಂದು ವಾರದೊಳಗಾಗಿ ಅವನು ಮದುವೆಯಾದೆನೆಂದು ಪತ್ರಿಕೆಯ ಮೂಲಕ ತಿಳಿದುಬಂತು.

( —Lost )

---

# ಸತ್ತವಳ ಜೀವನದ ಗುಟ್ಟು

ಸಾವಿನ ಅರಿವಿಲ್ಲದೆ, ಶಾಂತ ಮುದ್ರೆಯಿಂದ ಮಲಗಿದ ಅವರ ಮುಖದ ಮೇಲೆ ಪ್ರಶಾಂತವಾದ ಕಳೆ ಇತ್ತು. ಹತ್ತು ನಿಮಿಷಗಳ ಮುಂಚೆ ಅಲಂಕಾರ ಮಾಡಿಕೊಂಡಂತೆ ಅವಳ ಮುಖದ ವಿಕಾಸವನ್ನೂ ಕಳೆಗುಂದಿರಲಿಲ್ಲ. ಆ ಮೃತದೇಹವು ಬಹಳ ಶಾಂತ ರೀತಿಯಲ್ಲಿ ಜೀವನವನ್ನು ಕಳೆದು, ತನ್ನ ಇಳಿವಯಸ್ಸಿನಲ್ಲಿ ಸಿಗಬೇಕಾದ ಸಾವನ್ನು ಸಂತೋಷದಿಂದ ಅಪ್ಪಿದಂತೆ ಅವಳ ಮನೋಗತವಿತ್ತೇನೋ ಎಂಬ ಭಾವನೆ ಮುಖದ ಮೇಲೆ ಒಡೆದು ಕಾಣುತ್ತಿತ್ತು. ಸುಖಜೀವನದ ಕುರುಹಾದ ನಿರ್ಮಲ, ನಿಷ್ಕಳಂಕ ವರ್ತನೆಯಿಂದ ತನ್ನ ಇಡೀ ಜೀವನವು ರಸದೂಟದ ಸಮಯವಾಗಿತ್ತೆಂದು ಭಾವಿಸಿ, ವೈರಾಗ್ಯದ ಹಾದಿಯಲ್ಲಿ ಸಾವೇ ಅವಳನ್ನು ಹುಡುಕಿಕೊಂಡು ಬಂದುದೆಂದು ಮೃತ್ಯುವನ್ನು ಶಾಂತಚಿತ್ತದಿಂದಪ್ಪಿದಳೇನೋ ಎಂಬಂತಿತ್ತು ಅವಳ ಮುಖ ಛಾಯೆ. ಸ್ವರ್ಗದಲ್ಲಿ ತನಗಾಗಿ ಕಾದು ನಿಂತಿರುವ ಸುಖ ಪಲ್ಲಂಗವನ್ನೇರಿ ಅಮರತ್ವವನ್ನು ಪಡೆಯಲು ಹೋಗಿರುವಳೇನೋ ಎಂಬ ಭಾವನೆ (ಆ ಸ್ಥಿತಿಯಲ್ಲಿ) ಅವಳ ಕಳೇಬರುವನ್ನು ನೋಡಿದವರಿಗೆ ಆಗುವುದು ಖಂಡಿತ.

ಮೃತ್ಯುಶಯ್ಯೆಯ ಬಳಿ ಅವರ ಇಬ್ಬರು ಮಕ್ಕಳು ಮಂಡಿಸಿದ್ದರು. ಅವಳ ಮಗನೊಬ್ಬ ಹೆಸರಾದ ನ್ಯಾಯಾಧೀಶನು; ಮಗಳಾದ ಮಾರ್ಗರೇಟಳು ದೇವರ ಸಾನ್ನಿಧ್ಯವೇ ಮಾನವನಿಗೆ ಶಾಂತಿ ಸುಖಗಳನ್ನು ತಂದೊಡ್ಡುವುದೆಂದು ನೆನೆದು ಚಿಕ್ಕವಯಸ್ಸಿನಲ್ಲಿಯೇ ಮಠವನ್ನು ಸೇರಿ ಸಂನ್ಯಾಸಿನಿಯಾಗಿದ್ದಳು. ತನ್ನಿಬ್ಬರು ಮಕ್ಕಳಿಗೆ ಮೊದಲಿನಿಂದಲೂ ನಿಯಮಿತ ಜೀವನದ ಮಾರ್ಗದ ರಹಸ್ಯವನ್ನು, ಶಾಂತಿಯುತ ಬಾಳಿನಲ್ಲಿರುವ ಸುಖವೆಂತಹದೆಂಬುದನ್ನು ತಿಳಿಹೇಳಿದ್ದಳು. ಅವರಿಬ್ಬರ ಬಾಳು ನಾಗರಿಕತೆಯ ಹೊಳಪಿನಲ್ಲಿ ಸಿಕ್ಕು ಹಾಳಾಗಬಾರದೆಂದು ಅವಳ ಹೆಬ್ಬಯಕೆಯಾಗಿತ್ತು. ಅವಳ ಉಪದೇಶದಂತೆ ಮಗನು ನ್ಯಾಯಾಧಿಪತಿಯಾಗಿ ತಪ್ಪು ಮಾಡಿದವರನ್ನು ದಂಡಿಸುತ್ತ ಸರಿಯಾದ ನ್ಯಾಯಮೂರ್ತಿಯೆಂಬ ಹೆಸರುಗಳಿಸಿದ್ದನು. ಮಗಳಾದರೂ ಗಂಡಿನ ದ್ರೋಹ ಜಾಲದಲ್ಲಿ ಬೀಳುವುದು ಅಪಾಯಕರವೆಂದು ನೆನೆದು ವ್ಯಾಮೋಹ, ಕಾಮ, ಪ್ರೇಮಗಳಿಂದ ದೂರವೆಂದು ಎಣಿಸಿದ, ಮತ್ತು

ಯಾಗಲೂ ಭಗವಂತನ ಪೂಜೆಯಲ್ಲಿ ನಿರತವಾಗಿರುವ ಮಠವನ್ನು ಸೇರಿ ಸನ್ಯಾಸಿನಿಯಾಗಿದ್ದಳು

ಇವರಿಬ್ಬರಿಗೂ ತಮ್ಮ ತಂದೆ ಯಾರೆಂಬುದು ತಿಳಿದಿದ್ದರೂ ಅವನನ್ನು ನೋಡುವ ಅವಕಾಶ ದೊರೆತಿರಲೇ ಇಲ್ಲ. ಅವರ ತಂದೆಯೆಂದೆನಿಸಿಕೊಂಡವನು ಅವಳೊಂದಿಗೆ ಕೆಟ್ಟ ರೀತಿಯಲ್ಲಿ ನಡೆದುಕೊಂಡನೆಂಬುದು ಮಾತ್ರ ಅವರಿಗೆ ತಿಳಿದಿತ್ತು ಅವನ ಈ ಅಸಭ್ಯವರ್ತನೆಯಿಂದ ಅವರಿಗೆ ತಾಯಿಯಲ್ಲಿ ಮಮತೆ ಹೆಚ್ಚಿತು. ಆದುದರಿಂದಲೇ ಇಂದು ತಾಯಬಳಿ ಅವರ ಶೋಕ ಇಮ್ಮಡಿಯಾಗಿತ್ತು ಶವದ ಎರಡು ಪಕ್ಕದಲ್ಲಿ ಕುಳಿತು ಕಣ್ಣೀರಿಡುವ ಅವರ ದುಃಖದ ನೋಟ ಬಹು ಕರುಣಾಜನಕವಾಗಿತ್ತು ಹೀಗವರು ಮೌನದಲ್ಲಿ ಕುಳಿತಿರುವಾಗ ಮೆಲ್ಲನೆ ಬಾಗಿಲುತೆಗೆದು ಆ ಮನೆಗೆ ಸಂಬಂಧಿಸಿದ ಮಠಾಧಿಪತಿಯು ಬರುವುದನ್ನು ಅವರು ಕಂಡರು. ಅವನೊಬ್ಬ ಕೊಬ್ಬಿದಾಕಾರದ ಧೃಡಕಾಯನು ಅದೇ ತಾನೇ ಊಟ ಮುಗಿಸಿಕೊಂಡು ಬಂದ ಹೊಸ ಕಳೆ ಅವನ ಮುಖದ ಮೇಲೆದ್ದು ಕಾಣುತ್ತಿತ್ತು ಹಿಂದಿನ ರಾತ್ರಿ ಈ ಮನೆಯಲ್ಲಿ ನಿದ್ರೆ ಇಲ್ಲದೆ ಪಟ್ಟಶ್ರಮ ಪರಿಹಾರಕ್ಕೆಂದು ಊಟದ ಕೊನೆಯ ಪಾನೀಯವಾದ ಕಾಫಿಯಲ್ಲಿ ಹೆಚ್ಚು ಪ್ರಮಾಣ ಬ್ರಾಂಡಿಯನ್ನು ಸೇರಿಸಿ ಸೇವಿಸಿದ ಚಿಹ್ನಗಳು ಅವನ ಮುಖದಲ್ಲಿ ಕಂಡು ಬರುತ್ತಿದ್ದವು ದಿನವೂ ಸಾವಿನ ಉಡಿಯಲ್ಲಿ ಬೀಳುವ ಜನರ ಹತ್ತಿರ ಹಾರಿಹೋಗುವ ಪ್ರಾಣ ವಾಯುವನ್ನು ಹಿಡಿದಂತೆ ಕಾಯುವ'ಪ್ರಸಂಗಗಳೇ ತನ್ನ ಜೀವನದ ಹಿರಿಯ ಕೆಲಸವಾಗಿದ್ದ ಇವನಿಗೆ ಈ ದುಃಖದ ಸನ್ನಿವೇಶ ಹೊಸತೆನಿಸಲಿಲ್ಲ. ಕೈಗಳಿಂದ ದಿವ್ಯದೈವ ಚಿಹ್ನೆಯನ್ನು ಮಾಡುತ್ತ ಸತ್ತವಳ ಮಂಚವನ್ನು ಸಮೀಪಿಸಿ, "ಮಕ್ಕಳೇ ಈ ನಿಮ್ಮ ದುಃಖದ ಸಮಯದಲ್ಲಿ ನಿಮಗೆ ಸಹಾನುಭೂತಿಯನ್ನು ತೋರಲು ಬಂದಿರುವೆ" ಎಂದು ಗಂಭೀರವಾಗಿ ನುಡಿದನು

ಆದರೆ ತಂಗಿಯಾದ ಯೂಲೇಲಿಯು ( ಸಿಸ್ಟರ ಯೂಲೇಲಿ, ಇದು ಮಠದಲ್ಲಿ ಮಾರ್ಗರೇಟಳಿಗೆ ಅವರಿಟ್ಟ ಹೆಸರು) ಆತನ ಮಾತನ್ನೆತ್ತಿಕೊಂಡು "ತಮಗೇಕೆ ಶ್ರಮ? ಬೇಡ ನಮ್ಮನ್ನಗಲಿದ ತಾಯಿಯ ಹತ್ತಿರ ನಾವಿಬ್ಬರೇ ಇದ್ದು ಶಾಂತಿಯಿಂದ ಕಾಲಕಳೆಯಬೇಕೆಂದು ನಿಶ್ಚಯಿಸಿದ್ದೇವೆ. ಜೀವಿಸಿದ್ದಾಗ ನಾವು ಅವಳೊಂದಿಗೆ ಹೇಗೆ ಕೂಡಿ ಕಾಲಕಳೆದೆವೋ

ಅದೇ ರೀತಿಯಲ್ಲಿ ಇಂದು ಈ ಕಡೆಯ ರಾತ್ರಿ ಕಳೆಯಬೇಕೆಂದಿದ್ದೇವೆ. ಅವಳು " ಎಂದು ನುಡಿಯಲು ದುಃಖ ಉಕ್ಕಿ ಬಂದು ಮುಂದೆ ಮಾತ ನಾಡಲು ಅವಳಿಗೆ ಶಕ್ಯವಾಗಲಿಲ್ಲ

ಅದೇ ಗಂಭೀರ ವಾಣಿಯಿಂದ "ಹಾಗೆ ಆಗಲಿ ಮಕ್ಕಳೇ, ವಿಶ್ರಾಂತಿ ಪಡೆಯುವೆ" ಎಂದು ಹೇಳುತ್ತ ಮೊಳಕಾಲೂರಿ ಕುಳಿತು ಗಾಳಿಯಲ್ಲಿ ಕೈ ಗಳಿಂದ ಸಿಲುಬೆಯ ಚಿಹ್ನೆಯನ್ನು ಮಾಡಿ ಮೆಲ್ಲಗೆ ಎದ್ದು ನಿಂತು ಬಿಸಿಯುಸಿ ನಿಂದ "ಅವಳೊಬ್ಬ ಮಹಾ ತಪಸ್ವಿನಿ " ಎಂದು ಹೇಳುತ್ತ ಕೋಣೆಯಿಂದ ಹೊರಬಿದ್ದ.

ಮೂವರೇ ಆ ಕೋಣೆಯಲ್ಲಿ; ದೂರದಲ್ಲಿ ಮರೆಯಾಗಿರಿಸಲ್ಪಟ್ಟ ಗಡಿ ಯಾರದ ಸಪ್ಪಳ ಮಾತ್ರ ಕೇಳುತ್ತಿತ್ತು ಹೊರಗಿನ ಬೆಳುದಿಂಗಳಲ್ಲಿ ಹಸಿರು ಹುಲ್ಲಿನ, ಮತ್ತು ದಟ್ಟವಾಗಿ ಬೆಳೆದು ನಿಂತ ಗಿಡಮರಗಳ ಸುವಾಸನೆ ತೆರೆದ ಕಿಡಕಿಯಿಂದ ಬರುತ್ತಿತ್ತು ಹೊರಗೂ ಒಳಗೂ ಯಾವ ಸದ್ದೂ ಇರಲಿಲ್ಲ. ಆಗಾಗ ಕ್ರಿಮಿಕೀಟಕಗಳ ಮೃದುವಾದ ಇಂಪಾದ ಗಾಯನವು ಶಾಂತತೆ ಯನ್ನು ಅಷ್ಟೇನೂ ಕೆಡಿಸುತ್ತಿರಲಿಲ್ಲ

ಅಂತ್ಯವಿಲ್ಲದ ಕೊನೆಯ ನಿದ್ರೆಯಲ್ಲಿದ್ದ ಅವಳಿಗೆ ಈ ವಾತಾವರಣ ಬಹಳ ಹೊಂದಿಕೊಂಡಿತ್ತು. ಗಂಭೀರ ಶಾಂತತೆ, ದೈವದತ್ತ ಕರುಣಾಜನಕ ವಿಶ್ರಾಂತಿ, ಇವಳ ಸಾವಿನಲ್ಲಿ ಬೆರೆತು ದೇವಲೋಕದ ಶಾಂತ ಸಮುದ್ರಕ್ಕೆ ಇವಳನ್ನು ಕರೆದೊಯ್ಯಲು ಪ್ರಕೃತಿಯು ಸಹಿತ ಇವಳನ್ನು ಸಹಕರಿಸುವಂತಿತ್ತು ಆಗಿನ ಪರಿಸ್ಥಿತಿ.

ಈ ಗಂಭಿರ ಮೌನಾವಸ್ಥೆಯನ್ನು ಹೊಡೆದುಬ್ಬಿಸುವಂತೆ ಆಕೆಯ ಮಗನು ದುಃಖವನ್ನು ತಡೆಯಲಾರದೆ "ಅಮ್ಮಾ, ಅಮ್ಮಾ! ಅಮ್ಮಾ!!" ಎಂದು ಅಳತೊಡಗಿದನು. ಮಗಳು ಆವೇಶದಿಂದ ನೆಲಕ್ಕುರುಳುವಳೇನೋ ಎಂಬ ಭಂಗಿಯಲ್ಲಿ "ದೇವನೇ, ದೇವನೇ! ಪರಮ ದಯಾಳುವೆ, ನಮ್ಮ ತಾಯಿ "ಎಂದು ಅಳತೊಡಗಿದಳು.

ಕೊಂಚಸಮಯ ಇಬ್ಬರೂ ಮನದಣಿಯುವಷ್ಟು ಅತ್ತರು. ಅವರ ಶೋಕದ ಭಾರವು ಕಡಿಮೆಯಾಗದಿದ್ದರೂ ದಣಿವಿನಿಂದ ಕಡಿಮೆಯಾಯಿತು.

ಇಬ್ಬರೂ ಮತ್ತೆ ಆ ಉಸಿರಿಲ್ಲದ ಶರೀರದ ಕಡೆ ನೋಡಿದಾಗ ತಮ್ಮ ಜೀವನದ ಹಿಂದಿನ ಸನ್ನಿವೇಶಗಳೆಲ್ಲಾ ನೆನಪಿಗೆ ಬಂದವು. ತಮ್ಮ ನಡುವೆ ನಡೆದ ಮಾತುಗಳ ವಿವರ, ಹುಡುಗರಾಗಿದ್ದಾಗ ಅವಳು ತೋರಿದ ಮಮತೆಯ ಸಂದರ್ಭಗಳು, ಆಕೆಯ ಪ್ರೀತಿಯ ವಚನಗಳು, ಲಾಲನೆ ಪಾಲನೆಯ ವಿವರಗಳು ಎಲ್ಲವೂ ನೆನಪಿಗೆ ಬಂದವು ಯಾವುದನ್ನೂ ಮರೆಯದೆ ಎಲ್ಲ ವನ್ನೂ ನೆನೆದುಕೊಂಡರು ಅವಳಿಲ್ಲದ ಈ ಜಗತ್ತಿನಲ್ಲಿ ತಾವು ಹೇಗೆ ಜೀವಿಸ ಬೇಕೆಂಬ ಸಂಶಯವು ಉಂಟಾಗಲು ಮತ್ತೆ ದುಃಖಿಸಿದರು. ಆಕೆ ಇಲ್ಲದ ಈ ಜಗತ್ತಿನಲ್ಲಿ ತಾವು ಯಾವಬಗೆಯಲ್ಲಿ ಜೀವಂತ ಇದ್ದು ಮುಂದರಿಯ ಬೇಕೆಂಬ ಸಂಶಯ ಅವರಿಬ್ಬರನ್ನೂ ಹೆಚ್ಚಿನ ಶೋಕದಲ್ಲಿ ಕೆಡವಿತು.

ತಾಯಿಯಾದ ಅವಳು ಚಿಕ್ಕಂದಿನಲ್ಲಿ ಸಾಕಿ ಸಲಹಿದ್ದಳು ದೊಡ್ಡವ ರಾದನಂತರ ಮಮತೆಯ ಸಲಹೆಗಳಿಂದ ತಮ್ಮ ಜೀವನದ ಮಾರ್ಗದರ್ಶಕ ಳಾಗಿದ್ದಳು ಇಹಲೋಕದ ಜೀವನಕ್ಕೆ ಹೊಂದಿಕೊಂಡು ಹೋಗಲು ಸಹ ಕಾರವನ್ನು ನೀಡುತ್ತಿದ್ದ ತಾಯಿಯ ನೆರವು ದೂರಾದುದಕ್ಕೆ ಮರುಗಿದರು ಅವರ ಜೀವದುಸುರಿನಂತಿದ್ದು, ಲೋಕದ ಯಾತ್ರೆ ಯಶಸ್ವಿಯಾಗಿ ಸಾಗಿ ಸಲು ಸಹಕಾರವನ್ನು ನೀಡಿದ ತಾಯಿಯು ಮರೆಯಾದ ಈ ಲೋಕದಲ್ಲಿ ತಾವು ತಬ್ಬಲಿಗಳಂತೆ ಜೀವಿಸುವುದು ಕಷ್ಟವೆಂದು ರೋದಿಸಿದರು ಮುಂದೆ ಯಾವ ರೀತಿಯಲ್ಲಿ ಜೀವಿಸಬೇಕೆಂಬುದೇ ಸಮಸ್ಯೆಯಾಗುಳಿಯಿತು ಹುಡುಗ ರಂತೆ ಮುಖ ಮುಚ್ಚಿಕೊಂಡು ಅಳತೊಡಗಿದರು. ನಿರ್ಗತಿಕರಾದ ತಮ ಗಿನ್ನಾರು ದಿಕ್ಕೆಂದು ರೋದಿಸಿದರು

ತಂಗಿ ಅಣ್ಣನನ್ನು ಅಶ್ರುತುಂಬಿದ ಕಣ್ಣುಗಳಿಂದ ನೋಡುತ್ತ "ಅಣ್ಣಾ, ಅಮ್ಮನಿಗೆ ಮೆಚ್ಚಿನ ಕಾರ್ಯವೆಂದರೆ ತನಗೆ ಬಂದ ಕಾಗದಗಳನ್ನೋದುವು ದೆಂಬುದು ನಮಗೆ ತಿಳಿದ ವಿಷಯ ಆಕಪಾಟಿನಲ್ಲಿ ಅವಳು ಭದ್ರವಾಗಿರಿಸಿರುವ ಅವಳ ಕಾಗದಗಳನ್ನು ಓದಿದರೆ ಒಳಿತಲ್ಲವೆ ? ಈ ರಾತ್ರಿಯೆಲ್ಲವೂ ಅವುಗಳ ನ್ನೋದುತ್ತ ಕುಳಿತರೆ ಅವಳ ಆತ್ಮಕ್ಕೆ ಖಂಡಿತ ಶಾಂತಿ ದೊರೆಯುವುದೆಂದು ನನ್ನ ಭಾವನೆ ನಮ್ಮ ಮನೆಯ ಹಿಂದಿನ ಹಿರಿಯರ ಬಗ್ಗೆ ಅವಳು ನಮಗೆ ಹೆಚ್ಚು ವಿವರಗಳನ್ನು ಹೇಳಿಲ್ಲ ಈ ಹಳೆಯ ಕಾಗದಗಳನ್ನು ಓದಿದರೆ ನಮಗೆ ಆಕೆ ತಿಳಿಸಬೇಕೆಂದೆಣಿಸಿದ ವಿಷಯಗಳು ತಿಳಿಯುವುದಲ್ಲದೆ, ಅವಳ ಆತ್ಮಕ್ಕೆ

ಶಾಂತಿಯೂ ದೊರೆಯುವುದೆಂದು ನನಗೆ ನಂಬುಗೆ ಇದೆ. ಓದೋಣವೆ?" ಎಂದು ಸೂಚಿಸಿದಳು.

ಕಪಾಟಿನಿಂದ ಹಳದಿ ಕಾಗದದ ಪುಡಿಕೆಗಳನ್ನು ತೆಗೆದು ಎಲ್ಲವನ್ನೂ ಶವದ ಮೇಲೆ ಹೊದಿಸಿದ ಬಿಳಿಯ ಹೊದಿಕೆಯ ಮೇಲಿರಿಸಿದರು ಒಂದು ಪುಡಕೆಯ ಮೇಲೆ "ತಂದೆ" ಎಂದು ಬರೆದಿತ್ತು ಮೆಲ್ಲನೆ ಬಿಚ್ಚುತ್ತ ಅದರಲ್ಲಿಯ ಪತ್ರಗಳನ್ನು ಓದತೊಡಗಿದರು. ತಮ್ಮ ತಾಯಿಯು ಬಹು ಹಿಗ್ಗಿನಿಂದ ಕೇಳುತ್ತಿರುವಳೆಂದು ಅವರಿಬ್ಬರ ಭಾವನೆಯಿತ್ತು.

"ಅಣ್ಣಾ, ಇವುಗಳೆಲ್ಲವನ್ನೂ ಸೇರಿಸಿ, ನಮ್ಮ ತಾಯಿಯ ಸಮಾಧಿಯಲ್ಲಿ ಅವಳೊಂದಿಗೆ ಹೂಳಿಟ್ಟರೆ ಒಳಿತಲ್ಲವೆ?" ಎಂದು ಆವೇಶದಿಂದ ಹೇಳುತ್ತ ಏನನ್ನೂ ಬರೆಯದೇ ಇದ್ದ ಮತ್ತೊಂದು ಕಾಗದದ ಪುಡಕೆಯನ್ನು ತೆಗೆದು ಅದರಲ್ಲಿಯ ಒಂದು ಪತ್ರದ ವಿವರವನ್ನು ಹೀಗೆ ಗಟ್ಟಿಯಾಗಿ ಆವೇಶದಿಂದ ಓದತೊಡಗಿದಳು.

"ನನ್ನ ಪ್ರೀತಿಯ ಗಿಳಿಯೇ, ನಿನ್ನನ್ನು ನಾನು ಬಹಳವಾಗಿ ಪ್ರೀತಿಸುತ್ತೇನೆ. ನಿನ್ನೆಯಿಂದ ನಿನ್ನನ್ನು ನಾನೆಷ್ಟು ಮರೆಯಬೇಕೆಂದು ಯತ್ನಿಸಿದರೂ ಅಸಾಧ್ಯವೆನಿಸುತ್ತಿದೆ. ನನಗೆ ನಿನ್ನ ಹುಚ್ಚು ಹಿಡಿದಿದೆ. ನಿನ್ನ ಮುದ್ದಿನ ಸವಿನೆನಪು ಇನ್ನೂ ನನ್ನನ್ನಾವರಿಸಿದೆ. ನಿನ್ನ ಆ ಚೆಂದುಟಿಗಳ ಚಂದವೆಷ್ಟು? ಏನಾ ನಿನ್ನ ದೇಹಸ್ಪರ್ಶದ ಸುಖ? ಮಧುರ! ಮಧುರ!! ನಾನೀಗ ಹುಚ್ಚನಂತೆ ಕುಣಿಯುತ್ತಿರುವೆನು. ನನ್ನ ಕೈಗಳೆರಡೂ ನಿನ್ನ ಆಲಿಂಗನ ಸುಖಕ್ಕೆ ತೆರೆದು ನಿಂತಿವೆ ನಿನ್ನನ್ನು ಪಡೆಯಲು ನಾನು ಬಹು ಕಾತರನಾಗಿದ್ದೇನೆ. ನಿನ್ನ ದೇಹ ಸುಖವಲ್ಲದೆ ಇನ್ನಾವುದೂ ನನಗೆ ಶಾಂತಿಯನ್ನೀಯಲಾರದು. ನಿನ್ನ ಮುದ್ದಿನ ನೆನಪು ನನ್ನ ಬಾಯಲ್ಲಿ ನೀರೂರಿಸುತ್ತಿದೆ."

ಇದನ್ನು ಕೇಳಿ ಅವಳ ಅಣ್ಣಾ ಆಶ್ಚರ್ಯಚಕಿತನಾಗಿ ಎದ್ದು ನಿಂತ! ಪತ್ರವನ್ನೋದುವುದನ್ನು ಅವಳು ನಿಲ್ಲಿಸಿದ್ದಳು ಅವಳ ಕೈಯೊಳಗಿನ ಆ ಪತ್ರವನ್ನು ಆವೇಶದಿಂದ ಕಸಿದುಕೊಂಡು ಇಂತಹ ಪತ್ರವನ್ನು ಬರೆದವನಾರೆಂದು ನೋಡಿದ.

ಉದ್ವೇಗದಿಂದ ಆ ಪತ್ರದ ಕೆಳಗೆ ನೋಡಿದಾಗ ಅದರಲ್ಲಿ "ನಿನ್ನನ್ನು ಪ್ರೀತಿಸುವ ಹೆನ್ರೀ" ಎಂದು ಬರೆದಿತ್ತು.

"ಹೆನ್ರೀ"ಎಂಬ ಹೆಸರು ಅವರ ತಂದೆಯಾಗಿರಲಿಲ್ಲ. ಆತನ ಹೆಸರು ರೀನಿ.

ಗೊಂದಲದಲ್ಲಿ ಬಿದ್ದ ಆತನು ಅವಸರದಿಂದ ಮತ್ತೊಂದು ಪತ್ರವನ್ನು ತೆಗೆದು ನೋಡಿದ ಹೆನ್ರಿಯ ಹೆಸರಿನಲ್ಲಿದ್ದ ಆ ಪತ್ರದಲ್ಲಿ ಹೀಗೆ ಬರೆದಿತ್ತು:-

" ಇನ್ನು ಮುಂದೆ ನಿನ್ನನ್ನು ಚುಂಬಿಸದೆ ನಾನು ಜೀವಿಸುವುದು ಬಹಳ ಕಷ್ಟ, ಬಹು ವೇದನೆ— ನಿನ್ನವ ಹೆನ್ರಿ"

ಅವನು ಆವೇಶದಿಂದ, ತೀರ್ಪನ್ನು ಹೇಳುವ ನ್ಯಾಯಾಧೀಶನಂತೆ, ಕಠೋರವಾದ ನಿಶ್ಚಿತ ಮುಖ ಮುದ್ರೆಯಿಂದ ಸತ್ತುಬಿದ್ದ ಅವಳ ಕಲುಷಿತ ಮುಖದ ಕಡೆ ಸಿಟ್ಟಿದಿಂದ ನೋಡುತ್ತ ನಿಂತುಬಿಟ್ಟನು

ಈ ರಭಸವನ್ನು ನೋಡುವ ದುರ್ದೈವ ತನಗುಂಟಾಯಿತಲ್ಲವೆಂದು ಕಂಬನಿಗಳಿಂದ ಆ ತಂಗಿಯು ನಿಶ್ಚೇಷ್ಟಿತಳಾಗಿ ಗಡಗಡ ನಡುಗುತ್ತಿದ್ದಳು ಕೋಪದ ಭರದಲ್ಲೇನು ಮಾಡುವನೆಂಬುದನ್ನು ತಿಳಿಯದೆ, ದಂಗುಬಡಿದು ಭಯದಿಂದ ನೋಡುತ್ತ ನಿಂತಲ್ಲಿಯೇ ನಿಂತುಬಿಟ್ಟಿದ್ದಳು. ಆದರೆ ಅವನು ತನ್ನ ಸಿಟ್ಟನ್ನು ನುಂಗಿಕೊಂಡು ಕೋಪದಿಂದ ತಲೆಕಾದುದರಿಂದ ತೆರೆದಿದ್ದ ಕಿಟಕಿಯನ್ನು ಸಮೀಪಿಸಿ ಹೊರಗೆ ಬೆಳುದಿಂಗಳನ್ನು ನೋಡುತ್ತ ಗಾಳಿಯನ್ನು ಸೇವಿಸುತ್ತ ನಿಂತುಬಿಟ್ಟ

ಕೊಂಚಸಮಯದನಂತರ ಅವನು ಶವದ ಕಡೆ ನೋಡಿದಾಗ ಶೋಕ ತಪ್ತಳಾದ ತನ್ನ ತಂಗಿ ಚಲಿಸದೇ ಹಾಗೆಯೇ ನಿಂತಿರುವುದನ್ನು ಕಂಡ.

ಅಲ್ಲಿ ಕೆಳಗೆ ಚಲ್ಲಿದ ಕಾಗದಗಳೆಲ್ಲವನ್ನೂ ಸಿಟ್ಟಿನಿಂದ ಗುಂಪುಗೂಡಿಸಿ ಆ ಕಪಾಟಿನಲ್ಲೊಗೆದ. ಮೃತಳಾದ ತಾಯಿಯ ಮಂಚದ ಸುತ್ತಲೂ ಪರದೆಯನ್ನು ಎಳೆದು ಇಬ್ಬರೂ ದೂರ ಸರಿದು ನಿಂತರು. ಬೆಳಗಾಗಲು ಇನ್ನೂ ತಡವಿತ್ತು ಅಲ್ಲಿಯ ಆಸನಗಳ ಮೇಲೆ ಮಲಗಿ ಕೊಂಚ ಸಮಯ ನಿದ್ರಿಸಿದರು.

ಮೇಜಿನ ಮೇಲಿರಿಸಿದ ಮೇಣಬತ್ತಿಗಳ ಬೆಳಕು ಬೆಳಗಾದನಂತರ ಸೂರ್ಯನ ಆಗಮನದಿಂದ ಮಸಕಾಗಲು, ಅಲ್ಲಿಯ ಅರಾಮ ಕುರ್ಚಿಯಲ್ಲಿ ನೊಂದ ಹೃದಯದಿಂದ ನಿದ್ರಿಸುತ್ತಿದ್ದ ತಂಗಿಯನ್ನೆಬ್ಬಿಸಿ, ತಾನೂ ಎದ್ದುನಿಂತು ತಾಯಿಯ ಶವವನ್ನು ಇರಿಸಿದ್ದ ಮಂಚದ ಕಡೆ ಕಠೋರ ದೃಷ್ಟಿಯನ್ನು ಬೀರಿ

" ಬಾ ತಂಗಿ, ಇನ್ನು ಇಲ್ಲಿ ನಾವಿರಬಾರದು. ನಮ್ಮ ಕೆಲಸ ಮುಗಿಯಿತು. ಹೊರಗೆ ಹೋಗುವ " ಎಂದು ಹೇಳಿ ಇಬ್ಬರೂ ಕೋಣೆಯಿಂದ ಹೊರಬಿದ್ದರು. ( — Dead Woman's Secret )

# ಅದು ಕನಸೇ?

"ಆಕೆಯನ್ನು ನಾನು ಹೆಚ್ಚಾಗಿ ಪ್ರೀತಿಸುತ್ತಲಿದ್ದೆ! "ಮಾನವ ನೇತಕ್ಕೆ ಪ್ರೀತಿಸುವನು? ಅವನಲ್ಲಿ ಈ ಪ್ರೇಮೇಚ್ಛೆ ಏತಕ್ಕೆ ಮನೆ ಮಾಡಿಕೊಳ್ಳುವುದು? ನಾವು ಅತಿಯಾಗಿ ಪ್ರೀತಿಸುವವರ ಹೆಸರನ್ನು ರಹಸ್ಯವಾಗಿ, ಅತಿ ಮಮತೆಯಿಂದ ಉಚ್ಚರಿಸಿ, ಅದರಿಂದ ಪುಲಕಾಂಕಿತ ರಾಗಿ, ಮೈಮರೆತು, ಆನಂದ ಹೊಂದುವುದು ಏತಕ್ಕೆ? ಓರ್ವ ವಸ್ತುವನ್ನೇ ಪ್ರೀತಿಯಿಂದ ನೆನೆಯುವುದು, ಆ ಒಂದೇ ಭಾವನೆಯಿಂದ ಮನದಲ್ಲಿ ಆನಂದ ವನ್ನು ಹೊಂದುವುದು, ಒಂದೇ ಆಸೆಯಿಂದ ಆ ವಸ್ತುವಿಗಾಗಿ ಕಾಯು ತ್ತಿರುವುದು, ಹೃದಯಾಂತರಾಳದಿಂದ, ಪ್ರೀತಿಸಿದವರ ಹೆಸರನ್ನು ನಸುನಗುವಿ ನಿಂದ ಉಚ್ಚರಿಸುತ್ತ, ದೇವರ ಪ್ರಾರ್ಥನೆಯಂತೆ ಭಕ್ತಿಯಿಂದ ಆ ಹೆಸರನ್ನೇ ಮನನ ಮಾಡುವುದು ಪ್ರೇಮಿಗಳಲ್ಲಿ ಕಾಣಬಹುದಾದ ಸೈಜಸ್ವಭಾವವೆನ್ನ ಬಹುದು. ಈ ಭಾವನೆಗೆ ಕೊನೆಮೊದಲಿರುವುದಿಲ್ಲ ಧಾರೆಯಾಗಿ ಹರಿ ಯುತ್ತಿರುವುದೇ ಇದರ ಲಕ್ಷಣ."

"ನನ್ನ ಪ್ರಣಯ ಕತೆಯನ್ನು ಇಲ್ಲಿ ಹೇಳಬಯಸುತ್ತೇನೆ ನಮ್ಮ ಪ್ರಣಯ ಜೀವನ ಒಂದು ಬಗೆಯದು. ನಾನವಳನ್ನು ಬಹು ಅಕ್ಕರೆಯಿಂದ ಪ್ರೀತಿಸಿದೆ ಅವಳ ಮಮತೆಯ ಮಾತುಗಳಲ್ಲಿ ನನಗೆ ಹೆಚ್ಚು ವಿಶ್ವಾಸ, ಅವಳ ಮಧುರ ಮಾತು ಕೇಳುವುದೆಂದರೆ ಕುತೂಹಲ. ಅವಳ ಬಾಹುಗಳಲ್ಲಿ ನಿಂತು ಆಲಿಂಗನದ ಸುಖ ಪಡೆಯಲು ನಾನು ಹಾತೊರೆಯುತ್ತಿದ್ದೆ; ಹಗಲು, ರಾತ್ರಿ ಎನ್ನದೆ ಅವಳೆದುರು ನಿಂತು ಪ್ರೇಮದ ಮಾತುಗಳನ್ನಾಡುವುದೆಂದರೆ ನನಗೆ ಹಿಡಿಸಲಾರದಷ್ಟು ಆನಂದ. ಅವಳಿಲ್ಲದ ಜೀವನವು ನನಗೆ ಬಹು ದುಃಖವನ್ನು ತಂದೊಡ್ಡುತ್ತಿತ್ತು.

"ಆನಂತರ ಅವಳ ಸಾವು! ಆ ದುಃಖದ ದಿನ ಅದು ಹೇಗಾಯಿತೆಂಬು ವುದು ನನಗೆ ನೆನಸಿಲ್ಲ. ಎಲ್ಲವೂ ಮಾಯೆಯಂತೆನಿಸಿತು. ಒಂದು ದಿನ ಸಂಜೆ ಮಳೆಯಲ್ಲಿ ನೆನೆದು ಬಂದವಳೇ ನೆಗಡಿ ಕೆಮ್ಮಿನಿಂದ ಮಲಗಿದಳು. ಮುಂದೇನು ನಡೆಯಿತೆಂಬುವುದು ಸರಿಯಾಗಿ ನನ್ನ ನೆನಪಿನಲ್ಲುಳಿದಿಲ್ಲ. ಅನೇಕ ಬಗೆಯ ಜನರು, ಡಾಕ್ಟರುಗಳೂ ಬಂದರು. ಏನೇನನ್ನೋ ಬರೆದು ಹೋದರು.

ಅವರು ಕಳುಹಿದ ಔಷಧವನ್ನು ಆಕೆಯು ಕುಡಿಯುವಂತೆ ನೋಡಿ ಕೊಂಡುದೂ ಆಯಿತು ಅವಳ ತಲೆ ಬಹು ಬಿಸಿಯಾಗಿತ್ತು; ಕೈಗಳೆರಡು ಕೆಂಡದಂತೆ ಸುಡುತ್ತಿದ್ದವು; ಅವಳ ಕಣ್ಣುಗಳು ಮಿನುಗುತ್ತಿದ್ದರೂ ನೋವಿನಿಂದ ದಣಿದಂತೆ ಕಂಡುಬಂದವು ನಾನವಳನ್ನು ಅನೇಕ ಸಲ ಮಾತನಾಡಿಸಿದಾಗ ಮಾರುತ್ತರವನ್ನಿತ್ತಳು, ಆದರೆ ಅವಳೇನನ್ನು ಹೇಳಿದಳೆಂಬುದನ್ನು ನಾನೀಗ ಹೇಳಲಾರೆ. ನೆನಪು ಹಾರಿಹೋಗಿದೆ. ಎಲ್ಲವೂ ಕನಸಿನಂತೆ ಮಸುಕು ಮಸುಕಾಗಿ, ನೆನಪಿಗೆ ಬರುತ್ತಿದೆ ಕೊನೆಗೆ ಅವಳು ಬಲಹೀನತೆಯಿಂದ ನಿಟ್ಟುಸಿರನ್ನು ಬಿಡುತ್ತ ಸಾವನ್ನಪ್ಪಿದಳು ಅವಳ ಕೊನೆಯ ಗಳಿಗೆಗಳು ನನಗೆ ಚೆನ್ನಾಗಿ ನೆನಪಿನಲ್ಲಿವೆ ಆಯಾಸಗೊಂಡ ಅವಳು ಬಲಹೀನಳಾಗಿ ಉಸಿರನ್ನು ಆಡಿಸಲು ಸಹ ಶಕ್ತಿ ಇಲ್ಲದೆ, ಕುಗ್ಗಿ ಹಣ್ಣಾಗಿ ಸಾವಿನ ಉಡಿಯಲ್ಲಿ ಬಿದ್ದ ಕಡೆಯ ಗಳಿಗೆಯು ಮಾತ್ರ ನನಗೆ ಚೆನ್ನಾಗಿ, ವಿವರವಾಗಿ ನೆನಪಿದೆ. ಅವಳ ಪಕ್ಕದಲ್ಲಿದ್ದ ದಾದಿಯು ದುಃಖದಲ್ಲಿ " ಮುಗಿಯಿತು, ಆಯಿತು " ಎಂದ ಮಾತುಗಳಿನ್ನೂ ಪ್ರತಿಧ್ವನಿಸುತ್ತಲಿವೆ. ಎಷ್ಟು ದುಃಖಮಯ, ಅವಳ ಅಗಲುವಿಕೆ ! "

" ಮುಂದೇನು ಮಾಡುವುದೆಂಬುವುದು ತಿಳಿಯದಂತಾಯಿತು. ಮಠಾಧಿಪತಿಗೆ ಹೇಳಿ ಕಳುಹಿಸಿದೆ ಅವಳನ್ನು ನೋಡಿ "ಇವಳು ನಿಮ್ಮ ಸೂಳೆ!" ಎಂದ ಮಾತುಗಳು ನನಗೆ ಸರಿ ಬೀಳಲಿಲ್ಲ; ಕೋಪ ಬಂತು. ಅವನನ್ನು ಹೊರಟು ಹೋಗೆಂದು ಕೋಪಿಸಿಕೊಂಡೆ. ಸತ್ತು ಮಣ್ಣನ್ನು ಸೇರುವ ನನ್ನ ಪ್ರಿಯಳ ಬಗ್ಗೆ ಯಾರಾದರೂ ಅಸಹ್ಯದ ಮಾತುಗಳನ್ನಾಡಿದರೆ ಸಹಿಸಲು ನಾನು ಆಗ ಸಮರ್ಥನಿರಲಿಲ್ಲ ಅವಳ ಪವಿತ್ರಮಯ ಜೀವನದ ರಹಸ್ಯ ನನಗೊಬ್ಬನಿಗೆ ಮಾತ್ರ ತಿಳಿದಿತ್ತು. ಮತ್ತೊಬ್ಬ ಬಿಷಪ್ಪನನ್ನು ಕರೆದುಕೊಂಡು ಬಂದೆ. ಅವನ ಸಹೃದಯಪರ ಮಾತುಗಳನ್ನು ಕೇಳಿ, ನನಗೆ ನೆಮ್ಮದಿಯೆನಿಸಿತು.

" ಸ್ಮಶಾನ ಯಾತ್ರೆಯ ಬಗ್ಗೆ ನನ್ನನ್ನು ವಿಚಾರಿಸಿದರು. ಅವಳನ್ನು ಸ್ಮಶಾನಕ್ಕೆ ಒಯ್ಯಲು ಮಾಡಿದ ಸನ್ನಾಹವಾವುದೂ ನನ್ನ ನೆನಪಿನಲ್ಲಿ ಉಳಿದಿಲ್ಲ. ಪೆಟ್ಟಿಗೆಯಲ್ಲಿ ಅವಳನ್ನಿಡುವ ದೃಶ್ಯ ನನಗೆ ನೋಡಲಾಗಲಿಲ್ಲ ಪೆಟ್ಟಿಗೆಯನ್ನು ಮುಚ್ಚಿ ಮೊಳೆಗಳಿಂದ ಭದ್ರಪಡಿಸುವಾಗ ಅಲ್ಲಿ ದುಃಖದಿಂದ ಕಣ್ಣು ಮುಚ್ಚಿ ನಿಂತಿದ್ದೆ.

" ಅವಳನ್ನು ನೆಮ್ಮದಿಯಾದ ಸ್ಥಳದಲ್ಲಿ ಹೂಳಿಟ್ಟಾಯಿತು ಆ ಒಂದು ತಗ್ಗಿನಲ್ಲಿ ಅವಳ ಕೃಶವಾದ ದೇಹ! ಸ್ಮಶಾನಕ್ಕೆ ಅನೇಕ ಮಿತ್ರರು ಬಂದಿದ್ದರು. ಅವರನ್ನೆದುರಿಸುವ ಶಕ್ತಿ ನನ್ನಲ್ಲಿರಲಿಲ್ಲ. ಆವೇಶದಿಂದ ನನ್ನ ಮನೆಗೆ ಓಡಿ ಹೋದೆ ಮನೆ ಸೇರಿ ಮಾರನೆಯ ದಿನದಿಂದ ದೇಶಪರ್ಯಟನೆಗೆಂದು ಹೊರಟೆ. ಅವಳಿಲ್ಲದ ಮನೆಯಲ್ಲಿ, ಆ ಪ್ಯಾರಿಸ್ ನಗರದಲ್ಲಿ ಇರಲು ನನ್ನ ಮನಸ್ಸೊಪ್ಪಲಿಲ್ಲ. ದುಃಖವನ್ನು ಮರೆಯುವ ಕಾರಣದಿಂದ ನಾನು ಪ್ರವಾಸ ಕೈಕೊಂಡೆ

" ದೇಶವನ್ನು ಎರಡು ವರುಷಗಳವರೆಗೆ ಸುತ್ತಿ, ಪ್ಯಾರಿಸ್ ನಗರಕ್ಕೆ ಬಂದೆ. ಪ್ರವಾಸ ಮುಗಿಯಿಸಿಕೊಂಡು ಮನೆಯ ಬಾಗಿಲು ತೆರೆದು, ಅಲ್ಲಿಯ ವಸ್ತುಗಳೆಲ್ಲವನ್ನೂ ನೋಡಿದಾಗ, ಹೆಚ್ಚು ದುಃಖ ನನ್ನನ್ನು ಆವರಿಸಿತು. ಎಲ್ಲವೂ ಅದೇ ಸ್ಥಾನದಲ್ಲಿದ್ದವು ಆದರೆ ಸತ್ತವಳ ಬಾಯಲ್ಲಿ ಮಾತ್ರ ಮಣ್ಣು ಅವಳು ಉಪಯೋಗಿಸುತ್ತಲಿದ್ದ ಸಕಲ ವಸ್ತುಗಳೂ ನಿರ್ಜೀವವಾದವುಗಳಾಗಿದ್ದವು ಆ ದೃಶ್ಯ ನೋಡಿ ನನ್ನ ಹೃದಯ ಬಿದರಿತು. ತೆರೆದ ಕಿಟಿಕಿಯಿಂದ ಬೀದಿಯಲ್ಲಿ ಹಾರಿಕೊಂಡು ಪ್ರಾಣ ಬಿಟ್ಟುಬಿಡುವುದುಚಿತವೆಂದೆನಿಸಿತು ನಾನು ನಿರ್ಜೀವವಾದ ಇವುಗಳ ನಡುವೆ ಇರುವಾಗ ಅವಳೊಂದಿಗೆ ಕಳೆದ ಸುಖ ಸನ್ನಿವೇಶಗಳ ನೆನಪು ಬಂದು ನನ್ನನ್ನು ಹುಚ್ಚನಂತಾಗಿಸಿತು. ನನ್ನಿಂದ ದೂರಾದ ಅವಳು ಜೀವಂತ ಬಂದು ನನ್ನೊಂದಿಗೆ ಇರುತ್ತಿರುವಳೆಂಬಂತೆ ಭಾಸವಾಯಿತು. ಮರುಕ್ಷಣದಲ್ಲಿಯೆ, ಅವಳು ನಿಜವಾಗಿಯೂ ಸತ್ತಿರುವಳೆಂಬ ಭಾವನೆ ನನ್ನನ್ನು ನಿರಾಶಗೊಳಿಸಿತು ಇನ್ನೇನು ಈ ವೇದನೆ ಅನುಭವಿಸುವುದು ಕಷ್ಟವೆನಿಸಿ, ಮನೆ ಬಾಗಿಲು ಹಾಕಿಕೊಂಡು ಹೊರಗೆ ಹೊರಡಲು ಬಾಗಿಲನ್ನು ಸಮೀಪಿಸಿದೆ. ಬಾಗಿಲನ್ನು ಸೇರುವಾಗ ನಡುಮನೆಯಲ್ಲಿರಿಸಿದ ದೊಡ್ಡ ನಿಲುವುಗನ್ನಡಿಯು ನನ್ನ ಓಟವನ್ನು ತಡೆಯಿತು. ದಿನವೂ ಅಲಂಕೃತಳಾಗಿ ಹೊರಗೆ ಹೋಗುವಾಗ, ಆಹ್ಲಾದದಿಂದ ತನ್ನನ್ನು ತಾನೇ ನೋಡಿಕೊಂಡು ಹರುಷಪಡುವ ಅವಳ ದಿನಚರ್ಯೆ ನನ್ನ ನೆನಪಿಗೆ ಬಂತು.

" ಆ ಕನ್ನಡಿಯ ಹತ್ತಿರ ನಿರ್ವಾಹವಿಲ್ಲದೆ ನಿಂತೆ ದಿನವೂ ಶೃಂಗರಿಸಿಕೊಂಡು, ಬಹಳ ಉತ್ಸುಕತೆಯಿಂದ ನೋಡಿಕೊಂಡು ಹಿಗ್ಗುತ್ತಿದ್ದ ಆ

ಕನ್ನಡಿಯು ಅವಳ ಅತ್ಯಂತ ಪ್ರೀತಿಯ ವಸ್ತುವಾಗಿತ್ತು. ಆ ಕನ್ನಡಿಯಲ್ಲಿ ಅಚಲವಾಗಿ ಅವಳ ಪ್ರತಿಬಿಂಬ ಮೂಡಿಹೋಗಿತ್ತು ಅನೇಕ ಸಮಯಗಳಲ್ಲಿ ನಾವೀರ್ವರೂ ನಿಂತು ಕನ್ನಡಿಯಲ್ಲಿ ನಮ್ಮ ಸೊಬಗಿನ ರೂಪುಗಳನ್ನು ನೋಡಿ ಕೊಂಡು ಪ್ರೀತಿಮಯ ಚೇಷ್ಟೆಗಳನ್ನು ಮಾಡಿದ ನೆನಪೂ ಬಂತು ಆದುದ ರಿಂದಲೇ ಆ ಕನ್ನಡಿಯೆಂದರ ನನಗ ಹೆಂಡತಿಯ ಮೇಲಿದ್ದಷ್ಟೇ ಪ್ರೀತಿ ಹತ್ತಿರ ಹೋಗಿ ಆ ಕನ್ನಡಿಯ ಕಲ್ಲನ್ನು ಮುಟ್ಟಿದೆ ಅದರ ತಂಪು ನನ್ನನ್ನು ಬೆದರು ವಂತೆ ಮಾಡಿತು. ಅವಳು ಜೀವಂತ ಇದ್ದಾಗ ನಮಗುಂಟಾದ ಸಂತೋಷವು ಇಂದು ಹೆಚ್ಚಿನ ದುಃಖವನ್ನು ತಂದೊಡ್ಡಿದ್ದಿತು. ಇದು ನಿರ್ಜೀವ ವಸ್ತು ವಾದರೂ ನನಗೆ ಮಾತ್ರ ಅದು ಸುಖ ದುಃಖಗಳನ್ನು ತಂದುಕೊಡುವ ಚೇತನಾವಸ್ತುವಾಗಿತ್ತು ಆಗ ನನ್ನ ಹೃದಯದಲ್ಲಿಯ ಅನೇಕ ಸಂಕಟಗಳ ನೆನಪು ಬಂದುದರಿಂದ, ಅಲ್ಲಿ ನಿಲ್ಲಲಾರದ, ಸ್ಮಶಾನದ ಕಡೆ ಹೊರಟು ಅವಳ ಸಮಾಧಿಯನ್ನು ಸೇರಿದೆ ಬಿಳಿ ಹಾಸು ಸ್ಫಟಿಕ ಕಲ್ಲಿನಿಂದ ಮುಚ್ಚಲ್ಪಟ್ಟ ಅದರ ಮೇಲೆ, "ಎಲ್ಲರನ್ನೂ ಪ್ರೀತಿಸಿ, ಎಲ್ಲರಿಂದಲೂ ಪ್ರೀತಿಸಲ್ಪಟ್ಟು, ಮಡಿದಳು." ಎಂಬ ಅಕ್ಷರಗಳು ಕೆತ್ತಲ್ಪಟ್ಟಿದ್ದವು

"ಎಲ್ಲರಲ್ಲಿಯೂ ಜೀವಕಳೆ ತುಂಬಿದ ಅವಳ ದೇಹವಿಂದು ಮಣ್ಣಿನಲ್ಲಿ ಸೇರಿ ಪುಡಿಯಾಗಬೇಕೆ? ಏನಿದು ಅನ್ಯಾಯ? ಎಂತಹ ಘೋರತಮ ವಿಚಾರ? ಸಂತಾಪದಿಂದ ಅಲ್ಲಿ ಹೆಚ್ಚು ಹೊತ್ತು ಕಳದೆ ಸಂಜೆಯಾದುದ ರಿಂದ ಕತ್ತಲು ಕವಿಯಲು ಹೆಚ್ಚು ವಿಲಂಬವಿರಲಿಲ್ಲ ಕತ್ತಲಾದಂತೆಲ್ಲ ನನಗೆ ಭಯವಾಗಹತ್ತಿತು ಅಂದು ರಾತ್ರಿ ಪೂರ್ಣ ಅವಳ ಸಮಾಧಿಯ ಬಳಿ ಕಳೆಯಬೇಕೆಂದು ನಿಶ್ಚಯಿಸಿದೆ. ಒಬ್ಬನೇ ಕುಳಿತು ಮನದಣಿ ಅತ್ತು ವೇದನೆಯನ್ನು ಕಡಿಮೆಮಾಡಿಕೊಳ್ಳಬೇಕೆಂದು ನೆನೆದೆ. ಆದರೆ ಅಲ್ಲಿ ರಾತ್ರಿ ಯಾರನ್ನೂ ಇರಗೊಡುತ್ತಿರಲಿಲ್ಲ! ಕಾವಲುಗಾರನ ಕಣ್ಣನ್ನು ತಪ್ಪಿಸುವುದೆಂತು? ಒಂದೆಡೆ ನಿಲ್ಲದೆ, ಸ್ಮಶಾನದಲ್ಲೆಲ್ಲ ಮೆಲ್ಲನೆ ಸುಳಿದಾಡಿದೆ ಆ ಸ್ಮಶಾನ ನಾನು ವಾಸಿಸುತ್ತಲಿದ್ದ ನಗರದಷ್ಟು ವಿಶಾಲವಾಗಿರಲಿಲ್ಲ. ಸತ್ತ ವರ ಪ್ರಪಂಚ ಬಹಳ ಕಿರಿದು ಇದರಲ್ಲಿ ಸುಳಿದಾಡುವುದು ಬಹು ಸುಲಭ ವೆನಿಸಿತು. ಆದರೆ ಈ ಸಣ್ಣ ಸ್ಥಳದಲ್ಲಿ, ನಗರದಲ್ಲಿ ಜೀವಂತವಿರುವ ಜನರಿ ಗಿಂತಲೂ ಹೆಚ್ಚು ಜನರ ಸಮಾಧಿಗಳಿವೆ. ಜೀವಂತ ಇರುವವರಿಗೆ

ಹೆಚ್ಚು ಸ್ಥಳ ಬೇಕು? ಸತ್ತವರಿಗೆ ಒಂದಡಿ ಭೂಮಿಯಾದರೆ ಸಾಕು. ಯಾವ ಭೂಮಿಯ ಮೇಲೆ ಜನನವಾಗುವಾಗ ಕೂಸು ಮೊಟ್ಟಮೊದಲಿಗೆ ಬೀಳುವುದೋ, ಅದೇ ಭೂಮಿಯನ್ನು ಮಾನವನು ಸೇರುವನು! ಇರುವಾಗ ಅವನ ಅಟ್ಟಹಾಸವೇನು? ಅವನ ಆಡಂಬರದ ವ್ಯಾಪಾರಗಳೇನು? ಯಾವನು ಹುಮ್ಮಸ್ಸಿನಿಂದ ಕೆಲಸ ಮಾಡುವನೋ ಒಂದು ದಿನ ತಾನೂ ಸಾವನ್ನಪ್ಪುವನೆಂದು ಮನಗಂಡಿದ್ದರೂ, ಜೀವಂತ ಇರುವಾಗ ಅವನು ಅಧಿಕ ಮಮತೆಯಿಂದ ಉತ್ಸುಕತೆಯಿಂದ ಕೆಲಸ ಮಾಡುವುದು ಪ್ರಕೃತಿ ಧರ್ಮವು "ಬಡನೂರು ವರುಷಾನ ಹರುಷಾದಿ ಕಳೆಯೋಣ" ಎಂದಂತೆ ಹರುಷದಿಂದ ಕಳೆದು ಪುಣ್ಯ ಕಾರ್ಯಗಳನ್ನು ಮಾಡಿ, ಕೀರ್ತಿಗಳಿಸಿ, ಸಾಯುವವರು ಕೆಲವರು ಇನ್ನಿತರರು ಪಾಪ ಕಾರ್ಯಗಳಲ್ಲಿ ನಿರತರಾಗಿ, ಅಪಕೀರ್ತಿಯಿಂದ ಪ್ರಖ್ಯಾತರಾಗಿ ಮಡಿಯುವವರು ಹುಟ್ಟಿದ ಮೇಲೆ, ಪಾಪ, ಪುಣ್ಯ ಕಾರ್ಯಗಳನ್ನು ಮಾಡಿ, ಮಡಿಯುವವರು ಹಲಕೆಲವರು. ಅಂತೂ ಯಾರಿಗೂ ಸಾವು ತಪ್ಪುವುದಿಲ್ಲ ಹುಟ್ಟಿದವರು ಸಾಯಲೇಬೇಕೆಂಬುದು ನಿಸರ್ಗದ ನಿಯಮ! ಜನಿಸುವಾಗ ಆಸರಬೇಡುವ ಭೂಮಿಯನ್ನೇ ಕೊನೆಗೆ ಸತ್ತು ಸೇರುವ ಈ ಮಾನವ ಜೀವನದ ರಹಸ್ಯ ವಿಚಿತ್ರವಲ್ಲವೆ? ಸತ್ತವರಿಗೆ ಶಾಂತಿಯನ್ನೀಯುವ ಮೃತ್ಯುಜಗತ್ತೇ, ನಿನ್ನ ಲೀಲೆ ಅಗಾಧ! ನಿನ್ನ ಅಮಾನುಷ ಕಾರ್ಯವನ್ನು ಅಳೆಯುವುದು ಅಶಕ್ಯ! ನಿನ್ನ ವ್ಯಾಪಾರ ಅಮಾನುಷ! ನಿನಗೆ ನಮಸ್ಕಾರ! ಕೋಟಿ ನಮಸ್ಕಾರ!

ಹೀಗೆ ಮನದಲ್ಲಿ ನನಗೆ ಅನೇಕ ಭಾವನೆಗಳು ತಲೆದೋರಿದವು ನಾನು ಆ ಸ್ಮಶಾನದಲ್ಲಿ ಹರಿದಾಡುತ್ತಿರುವಾಗ ಒಂದು ಮೂಲೆಯಲ್ಲಿ ಬಹಳ ಪುರಾತನ ಕಾಲದಲ್ಲಿ ಸತ್ತವರ ಗೋರಿಗಳು ಪೂರ್ಣ ಜೀರ್ಣವಾಗಿದ್ದವು. ಆಯಾ ಸ್ಥಳಗಳಲ್ಲಿ ಮಲ್ಲಿಗೆಯ, ಗುಲಾಬಿಯ ಲತೆಗಳು ಬೆಳೆದಿದ್ದುವು. ಸತ್ತವರ ಎಲುಬು, ಮಾಂಸದ ಸಾರದಿಂದ ಬೆಳೆದ ಈ ಗಿಡಬಳ್ಳಿಗಳು ಬಯಲು ಸೀಮೆಯಲ್ಲಿ ತಾವೇ ತಾವಾಗಿ ರಂಜಿಸುವ ಸುಮಗಳ ನಿರ್ಮಲತೆಯನ್ನು ಪಡೆದಿರಲಿಲ್ಲವೆಂದು ನನಗೆನಿಸಿತು

"ಅಲ್ಲಿ ನಾನೊಬ್ಬನೇ ಇದ್ದೆ ಕಾವಲುಗಾರನ ಕಣ್ಣಿಗೆ ಬೀಳಬಾರದೆಂಬ ನೆವದಿಂದ, ಅಲ್ಲಿ ದಟ್ಟವಾಗಿ ಬೆಳೆದ ಒಂದು ಪೊದೆಯ ಹಿಂದೆ ಸ್ಥಳ

ಮಾಡಿಕೊಂಡುನಿಂತೆ ಪೂರ್ಣ ಪ್ರವಾಹದಲ್ಲಿ ಸಿಕ್ಕುಬಿದ್ದವನು, ಒಂದು ದೊಡ್ಡ ಮರಕ್ಕೆ ತಬ್ಬಿಕೊಂಡು ಕಾದು ನಿಂತವನಂತಿತ್ತು ನನ್ನ ಆಗಿನ ಅವಸ್ಥೆ.

“ಕಾವಲುಗಾರನು ಹೊರಟುಹೋದನೆಂದು ನಿಶ್ಚಯಮಾಡಿಕೊಂಡು ಹೊರಬಿದ್ದೆ ಎಲ್ಲೆಲ್ಲಿಯೂ ಕತ್ತಲೇ, ಸಪ್ಪಳ ಮಾಡದೆ, ಮೆಲ್ಲನೆ ಹೆಜ್ಜೆ ಹಾಕುತ್ತ ಸತ್ತವರ ತಲೆಗಳ ಮೇಲ ಕಾಲಿಡುವೆನೇನೋ ಎಂಬ ಭಾವನೆಯಿಂದ ಸುಳಿದಾಡಿದೆ ಎಷ್ಟು ಹುಡುಕಿದರೂ ನನ್ನವಳ ಸಮಾಧಿ ಇದ್ದ ಸ್ಥಳ ಸಿಗಲಿಲ್ಲ. ಹುಡುಕುವಾಗ ಚಾಚಿದ ಕೈಗಳಿಗೆ, ನನ್ನ ಶರೀರದ ಇತರ ಭಾಗಗಳಿಗೆ ಅನೇಕ ಸಮಾಧಿಗಳ ಕಲ್ಲುಗಳು ತಗುಲಿದುವು ಕುರುಡನಂತೆ ಹುಡುಕಿ ಅಲೆದಾಡಿದ ಆ ಕಲ್ಲುಗಳ ಮೇಲೆರಿಸಿದ್ದ ಅನೇಕ ಹೂಮಾಲೆಗಳನ್ನೂ, ಇತರ ನೆನಪಿನ ವಸ್ತುಗಳನ್ನೂ ಮುಟ್ಟಿ ನೋಡಿದೆ ಅವುಗಳ ಮೇಲೆ ಕೆತ್ತಿದ ಅಕ್ಷರಗಳನ್ನು ಜೋಡಿಸಿಕೊಂಡು ಓದಿಕೊಂಡೆ ಎಂತಹ ಘೋರ ರಾತ್ರಿ ಅದು! ಏನು ಭಯಾನಕ ಕರಾಳ ರಾತ್ರಿ ಅದು! ನನ್ನ ಪ್ರೇಯಸಿಯ ಸಮಾಧಿ ಸಿಗಲೇ ಇಲ್ಲ!

ಚಂದಿರನ ಸುಳಿವಂತೂ ಇರಲೇ ಇಲ್ಲ ವಿರಹಿಗಳ ವೈರಿ ಅವನು-ದಯಿಸಿ ಕಾಡಬೇಕಾಗಿತ್ತು ಆದರ ಅವನ ಬರುವಿಕೆಯಿಂದ ನನ್ನ ಇನಿಯಳ ಗೋರಿ ಸಿಗುವುದೆಂಬ ಕಾರಣದಿಂದ ಬಾರದಿರುವನೇನೋ ? ಸಮಾಧಿಗಳ ಈ ನಾಲಿನ ನಡುವೆ, ನನ್ನ ಬಾಳು! ಅಂದು ರಾತ್ರಿ ಆ ವಿಚಿತ್ರ ಬಾಳು! ಭಯಾನಕ! ಎಲ್ಲೆಲ್ಲಿಯೂ ಸಮಾಧಿಗಳೇ! ಗೋರಿಗಳೇ! ಸುತ್ತಾಡಿ ಬೇಸತ್ತೆ: ಬಹಳ ಹೊತ್ತು ಅಲೆದಾಡಿ ದಣಿದ! ಕಾಲು ಸೋತು. ಒಂದು ಗೋರಿಯ ಮೇಲೆ ಧೊಪ್ಪೆಂದು ಕುಸಿದು ಬಿದ್ದ ನನ್ನೆದೆ ವೇಗವಾಗಿ ಹೊಡೆದುಕೊಳ್ಳುತ್ತಿತ್ತು! ಅದರ ಹೊಡತದೊಂದಿಗ ಏತ್ತೇನೋ ನನಗೆ ಕೇಳಿಸತ್ತಿತ್ತು. ಅರ್ಥವಾಗದ, ಗೊಂದಲವನ್ನೆಬ್ಬಿಸುವಂತಹ ಅನಿಚ್ಛೆಳ ಧ್ವನಿಯು ಕೇಳಿಸುತ್ತಿತ್ತು. ಹೇಳಹೆಸರಿಲ್ಲದಂತಹ ಆ ನಾದವು ಎಲ್ಲಿರುವುದೆಂಬುದು ತಿಳಿಯಲಿಲ್ಲ ನನ್ನ ತಲೆಯಲ್ಲಿಯ ಹಾರಾಟವೇ ಇರಬೇಕೆಂದೆನಿಸಿತು ಅಲ್ಲದೆ ಕೆಳಗೆ ಭೂಮಿಯಲ್ಲಿ ಹುಡಿಗೂಡಿ ಹೋದವರ ನಿನಾದವಾಗಿರಬಹುದು. ಸುತ್ತಲೂ ನೋಡಿದೆ ಸುಮ್ಮನೆ ನೋಡುತ್ತ ಕುಳಿತುಕೊಂಡೆ ಹೀಗೆ ಎಷು ಹೊತ್ತು ಇದ್ದೆನೆಂಬುದು ತಿಳಿಯಲಿಲ್ಲ ಅಲ್ಲಿಯ ಭಯಾನಕ ವಾತಾವರಣದಲ್ಲಿ

ನಾನು ಕಂಗೆಟ್ಟು, ನಿಸ್ಸಹಾಯದಿಂದ ಭೀತಿಗೊಂಡು, ಸಹಾಯಕ್ಕೆ ಯಾರ ರನ್ನಾದರೂ ಒದರಬೇಕೆಂದೆನಿಸಿತು. ಆದರೆ ಭಯ! ಯಾರ ನೆರವೂ ದೊರೆಯದಿದ್ದರೆ, ಅಲ್ಲಿಯೇ ಸಾಯುವುದೇ ಒಳಿತೆಂದು ನೆನೆದೆ.

"ಇದಕ್ಕಿದ್ದ ಹಾಗೆ, ನಾನು ಕುಳಿತಿದ್ದ ಆ ಬಿಳಿ ಹಾಸುಕಲ್ಲು ಕದಲುತ್ತಿರುವದಂತೆನಿಸಿತು ನಿಜವಾಗಿಯೂ ಅದು ಕದಲುತ್ತಿತ್ತು; ಅದಲ್ಲದೆ ಆ ಕಲ್ಲು ಮೇಲಕ್ಕೇಳುತ್ತಿರುವಂತೆ ಕಂಡು ಬಂತು ಭಯಗೊಂಡು ಬದಿಗಿದ್ದ ಹಾಸುಗಲ್ಲಿಗೆ ಹಾರಿದೆ. ಆ ಕಲ್ಲು ನೇರವಾಗಿ ಎದ್ದು ನಿಂತಿತು ಆ ಗೋರಿಯಲ್ಲಿಯ ಪ್ರೇತ ಒಂದು ಹೊರಬಿತ್ತು. ಬದಿಗೆ ನಿಂತು ಮತ್ತೆ ಆ ಕಲ್ಲನ್ನು ಸಮಾಧಿಯ ಮೇಲೆ ಮಲಗಿಸುವುದನ್ನು ಕಂಡೆ ಕತ್ತಲಾಗಿದ್ದರೂ ಇದೆಲ್ಲವೂ ನನಗೆ ನಿಚ್ಚಳವಾಗಿ ಕಂಡುಬರುತ್ತಿತ್ತು ಆ ಕಲ್ಲಿನ ಮೇಲೆ ಕೆತ್ತಿದ ವಿವರ ಹೀಗಿತ್ತು.

"ಇದರಡಿಯಲ್ಲಿ ಜಾಕಿಸ್ ಆಲಿವಾಂಟನು ಮಲಗಿರುವನು. ಐವತ್ತೊಂದನೆಯ ವಯಸ್ಸಿನಲ್ಲಿ ಮಡಿದ ಇವನು ತನ್ನ ಮನೆಯವರೆಲ್ಲರನ್ನೂ ಮಮತೆಯಿಂದ ಪ್ರೀತಿಸಿದನು. ಇವನ ಜೀವನ ಆದರ್ಶಮಯವಾಗಿತ್ತು ದೇವರ ಕೃಪೆ ಇವನ ಮೇಲೆ ಪೂರ್ಣವಾಗಿರಲಿ."

"ಇದನ್ನು ನಾನು ಮೊದಲು ಓದಿಕೊಂಡೆ. ಆ ಸತ್ತ ಮನುಷ್ಯನೂ ಓದಿದ ಕಾಲುರಸ್ತೆಯಲ್ಲಿ ಬಿದ್ದಿದ್ದ ಒಂದು ಚೂಪುಕಲ್ಲಿನಿಂದ ಅದೆಲ್ಲವನ್ನೂ ಕಾಣದಂತೆ ಅಳಿಸಿದ ಅಳಿಸಿಹೋದ ಆ ಅಕ್ಷರಗಳಲ್ಲಿದ್ದ ಸ್ಥಳವನ್ನು ಮತ್ತೆ ನೋಡಿದ. ಆ ಸ್ವಚ್ಛವಾದ ಕಲ್ಲಿನ ಮೇಲೆ ತನ್ನ ಬೆರಳಿನ ಎಲುಬಿನಿಂದ ನಿಚ್ಚಳವಾದ ಅಕ್ಷರಗಳನ್ನು ಕೆತ್ತಿದ ಅವುಗಳ ವಿವರ ಹೀಗಿತ್ತು.—

"ಇದರಡಿಯಲ್ಲಿ ತನ್ನ ಐವತ್ತೊಂದನೆಯ ವಯಸ್ಸಿನಲ್ಲಿ ಮಡಿದ ಜಾಕಿಸ್ ಆಲಿವಾಂಟನು ಮಲಗಿರುವನು. ತನ್ನ ತಂದೆಯ ಆಸ್ತಿಯ ಪೂರ್ಣ ಸ್ವಾಧೀನ ಮಾಡಿಕೊಳ್ಳಲು ತಂದೆಯನ್ನು ಕೊಲ್ಲಿಸಿದ; ಪ್ರೀತಿಸಿದ ಹೆಂಡತಿಯನ್ನು ಹಿಂಸಿಸಿದ, ಮಕ್ಕಳ ಮರಿಗಳನ್ನು ಪೀಡಿಸಿದ; ನೆರೆಹೊರೆಯವರನ್ನು ಮೋಸಮಾಡಿದ, ಯಾರೊಂದಿಗೂ ಅವನು ನೀತಿಯಿಂದ ನಡೆದುಕೊಳ್ಳಲಿಲ್ಲ, ಕೊನೆಯಲ್ಲಿ ಅವನು ನಾನಾಬಗೆಯ ಕಷ್ಟಗಳಿಗೊಳಗಾಗಿ ಸತ್ತು ಇಲ್ಲಿ ಮಲಗಿರುವನು."

ಈ ರೀತಿ ಬರೆದನಂತರ, ತಾನು ಬರೆದು ಮುಗಿಸಿದ ಅಕ್ಷರಗಳನ್ನು ದಿಟ್ಟಿಸಿ ನೋಡಿದ. ಸುತ್ತಲೂ ಸ್ಮಶಾನದಲ್ಲಿ ನೋಡಲಾಗಿ, ಎಲ್ಲ ಗೋರಿಗಳಿಂದ ಸತ್ತವರು ತಮ್ಮ ತಮ್ಮ ಗೋರಿಗಳ ಮೇಲೆ ನಿಜಾಂಶವನ್ನು ಬರೆಯು

ತ್ತಿರುವುದನ್ನು ಕಂಡೆ  ಎಲ್ಲರೂ ತಮ್ಮ ಜೀವನದಲ್ಲಿ ಮಾಡಿದ ಲೋಪ ದೋಷಗಳನ್ನು ಹಿಂದೂ ದೇಶದ ನಂಬುಗೆಯಂತೆ, ಯಮನ ಮುಂದೊಪ್ಪಿಸು ವಂತೆ ಒಪ್ಪಿಕೊಂಡುತಿತ್ತು  ತಾವು ಜೀವಿಸಿದ್ದಾಗ ತಮ್ಮ ತಪ್ಪುಗಳನ್ನು ಯಾರೂ ಕಂಡಿಲ್ಲವೆಂದು ತಿಳಿದವರು, ಈಗ ತಮ್ಮ ತಪ್ಪುಗಳನ್ನೆಲ್ಲ ಒಪ್ಪಿ ಕೊಳ್ಳುತ್ತಿದ್ದರು. ಅನೀತಿವಂತರು, ವ್ಯಭಿಚಾರಿಗಳು, ಮೋಸಗಾರರು, ಕೊಲೆ ಗಡುಕರು,ಕಳ್ಳರು,ಸುಳ್ಳರು ಮೊದಲಾದವರು ತಮ್ಮ ಜೀವನದ ರಹಸ್ಯವನ್ನು ಹೊರಗೆಡವಿ, ತಾವು ಮಾಡಿದ ತಪ್ಪುಗಳನ್ನೆಲ್ಲ ಒಪ್ಪಿಕೊಳ್ಳುತ್ತಿದ್ದರು.  ನಿಜ ವನ್ನು ಬರೆದಿಡುವುದರಲ್ಲಿ ಎಲ್ಲರೂ ಆಸಕ್ತರಾಗಿರುವುದನ್ನು ನೋಡಿ ನನ ಗಾಶ್ಚರ್ಯವೆನಿಸಿತು  ತೋರಿಕೆಗೆ ಒಳ್ಳೆಯವರೆಂದು ಕಂಡು ಬಂದ ಜನ ರೆಲ್ಲರೂ ಅನೀತಿವಂತರೆಂಬುವುದು ನನಗೆ ಆಗ ತಿಳಿದುಬಂತು

"ನನ್ನವಳೂ ಏನಾದರೂ ಹೊಸತನ್ನು ಬರೆದಿರಬೇಕೆಂದು ನನಗೆನಿ ಸಿತು  ಇವರ ಮಧ್ಯೆ, ಈ ಪ್ರೇತಗಳ ನಡುವೆ ಇಲ್ಲಿಯವರೆಗೆ ಇದ್ದುದರಿಂದ ನನಗೆ ಕೊಂಚ ಧೈರ್ಯ ಬಂದಿತ್ತು ಆದುದರಿಂದ ನಿರ್ಭಯದಿಂದ ಈ ಪ್ರೇತ ಗಳ ಗುಂಪಿನಲ್ಲಿ ಹಾದು ನನ್ನ ಹೆಂಡತಿಯ ಗೋರಿಯನ್ನು ಸಮೀಪಿಸಿದೆ. ಅವಳನ್ನು ಕಂಡು ಹತ್ತಿರ ಹೋದೆ  ಅವಳಿಗೆ ಕಾಣದಂತೆ ಹಿಂದೆ ನಿಂತು ಮತ್ತೇನನ್ನು ಬರೆದಿರುವಳೆಂಬುದನ್ನು ಆತುರದಿಂದ ನೋಡಿದೆ

"ಎಲ್ಲರನ್ನೂ ಪ್ರೀತಿಸಿ, ಎಲ್ಲರಿಂದಲೂ ಪ್ರೀತಿಸಲ್ಪಟ್ಟು, ಮಡಿದಳು" ಎಂದು ಬರೆದಿದ್ದ ವಿವರ ಅಳಿಸಿಹೋಗಿತ್ತು.  ಅದರ ಸ್ಥಳದಲ್ಲಿ—

"ಒಂದು ದಿನ ಸಂಜೆ, ಮನೆಯನ್ನು ಬಿಟ್ಟು, ಮಿತ್ರೋರ್ವನೊಂದಿಗೆ ವಿಲಾಸದಲ್ಲಿದ್ದು ಹಿಂದಿರುಗುವಾಗ ಮಳೆಯಲ್ಲಿ ನೆನೆದು. ನೆಗಡಿ ಜ್ವರದಿಂದ ನರಳಿ, ಮಡಿದಳು.  ಅವಳಿಲ್ಲಿ ಮಲಗಿರುವಳು."

ಎಂದು ಬರೆದಿತ್ತು.

"ಮೂರನೆಯ ದಿನ ಸ್ಮಶಾನಕ್ಕೆ ಬಂದ ಜನರು, ನಾನು ಎಚ್ಚರತಪ್ಪಿ ನನ್ನವಳ ಗೋರಿಯ ಮೇಲೇ ಮಲಗಿದ್ದುದನ್ನು ಕಂಡರಂತೆ."

( —Was it a dream ? )

---

# ಅಪರಾಧಿ ಯಾರು—?

ಪಾಶ್ಚಾತ್ಯ ದೇಶಗಳಲ್ಲಿ ಅವಿವಾಹಿತ ಸ್ತ್ರೀಯರನ್ನು ಶ್ರೀಮಂತರ ಮನೆಯಲ್ಲಿ ಕೆಲಸಕ್ಕೆ ಇಟ್ಟುಕೊಳ್ಳುವ ರೂಢಿ ಸಮಾಜ ಸಮ್ಮತವಾದುದು. ಆದರೆ ಅನೇಕ ಸಲ ಇಂತಹ ಸ್ತ್ರೀಯರ ಮಾನಾಪಹರಣವಾಗದಂತೆ ಅವರು ಸುರಕ್ಷಿತ ಉಳಿಯುವದು ವಿರಳ. ಶ್ರೀಮಂತರ ದೌರ್ಜನ್ಯಕ್ಕೆ ಬಲಿಯಾಗಿ ಅನೇಕ ಯುವತಿಯರ ಬಾಳು ಹಾಳಾದುದರ ನಿದರ್ಶನಗಳು ನಮ್ಮ ಮುಂದೆ ಬಂದು ನಿಲ್ಲುತ್ತವೆ ಇದೇ ಬಗೆಯ ಅನಾಹುತಕ್ಕೆ ಬಲಿಯಾದ ಯುವತಿಯೊಬ್ಬಳ ಆತ್ಮಕಥೆ ಇದು

ಅವಳು ಸ್ಫುರದ್ರೂಪಿ, ಯುವತಿ; ಅವಿವಾಹಿತಳು ಶ್ರೀಮಂತರ ಮನೆಯಲ್ಲಿ ಕೆಲಸ ಮಾಡಿ, ಕೆಲಕಾಲದ ನಂತರ ತಕ್ಕ ವರನನ್ನು ಮದುವೆಯಾಗುವುದಕ್ಕಾಗಿ, ಹಣ ಗಳಿಸಿಡುವ ಉದ್ದೇಶದಿಂದ ಕೆಲಸಕ್ಕೆ ನಿಂತಳು ಮಾನ ಮರ್ಯಾದೆಗಳನ್ನರಿತ ಸುಶಿಕ್ಷಿತ ಹೆಣ್ಣು ಮನೆಕೆಲಸಗಳನ್ನೆಲ್ಲ ಹೆಚ್ಚು ದಕ್ಷತೆಯಿಂದ ಮಾಡುವ ಸ್ವಭಾವದವಳು ಇಂಥವಳು ತಮ್ಮಲ್ಲಿರುವಳಲ್ಲ ಎಂಬ ಹೆಮ್ಮೆ ಆ ಶ್ರೀಮಂತರದಾಗಿದ್ದಿತು

*　　　*　　　*　　　*

ಅಂದು ಅದೇ ಯುವತಿ ನ್ಯಾಯಾಧೀಶರ ಮುಂದೆ ತನ್ನ ಮಗುವನ್ನು ಕೊಲೆ ಮಾಡಿದ ಅಪರಾಧಕ್ಕಾಗಿ ವಿಚಾರಣೆಗೆಂದು ನಿಂತಿರುವಳು ಮದುವೆಯಾಗದೇ ಇವಳು ಗರ್ಭಿಣಿಯಾದುದು ಹೇಗೆ? ನ್ಯಾಯಸ್ಥಾನದಲ್ಲಿ ಅಪರಾಧಿಯಾಗಿ ಅವಳು ತಲೆಬಾಗಿ ನಿಂತಿರುವಳು ಮತ್ತೊಂದು ಮೂಲೆಯಲ್ಲಿ ಅವಳು ಕೆಲಸಕ್ಕೆ ನಿಂತ ಶ್ರೀಮಂತರ ಮನೆಯವರು ಕುಳಿತಿರುವರು ಜನರು ಈ ಕೊಲೆಯ ವಿವರಗಳನ್ನು ತಿಳಿಯುವ ಕುತೂಹಲದಿಂದ ಕಾದಿರುವರು. ನೋಡುವವರಿಗೆ ಚಿನ್ನಾಟವಾದರೂ ಆ ಯುವತಿಯು ದುಃಖದಿಂದ ನಿಂತಿರುವ ಕರುಣಾಜನಕ ನೋಟ ಎಂಥವರ ಮನಸ್ಸನ್ನೂ ಕರಗಿಸುವಂತಿತ್ತು.

ಶ್ರೀಮಂತರ ಮನೆಯ ತೋಟದಲ್ಲಿ ಓರ್ವ ಮಗುವನ್ನು ಕೊಂದ ಅಪರಾಧದ ವಿವರಗಳೇನೆಂದು ನ್ಯಾಯಾಧಿಪತಿಯು ಕೇಳಿದಾಗ, ಅವಳು ಮಾತುಗಳನ್ನಾಡಲಾರದೇ ಅಳಹತ್ತಿದಳು ಅವಳ ಈ ಅಳು. ಕೃತ್ರಿಮವಲ್ಲವೆಂಬುವುದು

ನ್ಯಾಯಾಧೀಶನ ಮನಸ್ಸಿಗೆ ಮಾತ್ರವೇ ಹೊಳೆದಿದ್ದಿತು. ಎಲ್ಲ ಬಾಹ್ಯ ನಿದರ್ಶನಗಳು ಇವಳೇ ಕೊಲೆ ಮಾಡಿರುವಳೆಂಬುವುದನ್ನು ನಿರ್ಧರಿಸುತ್ತಿದ್ದವು. ಆದರೂ ಅವಳ ಆತ್ಮಚರಿತ್ರೆಯ ಹೆಚ್ಚಿನ ವಿವರಗಳನ್ನು ತಿಳಿಯದೆ, ತೀರ್ಮಾನವನ್ನು ಹೇಳುವದಿಲ್ಲವೆಂದು ಸೂಚಿಸಿ, ಅವಳ ಪ್ರೇಮ ವ್ಯಾಪಾರದ ವಿವರಗಳನ್ನು ಹೇಳಬೇಕೆಂದು ನ್ಯಾಯಾಧೀಶರು ಒತ್ತಾಯಪಡಿಸಿದರು

ನಡುಗುವ ತುಟಿಗಳಿಂದ ಆ ಯುವತಿ ಯಾವ ಮಾತನ್ನೂ ಆಡದೇ ಅಳುತ್ತ ತಾನು ಕೆಲಸಕ್ಕೆ ನಿಂತ ಶ್ರೀಮಂತರ ಕಡೆ ಒಂದು ಸಲ ಭಯಪೂರಿತ ನೋಟವನ್ನು ಬೀರಿ ಸುಮ್ಮನಾದಳು ಇದರ ಇಂಗಿತವನ್ನರಿತ ನ್ಯಾಯಾಧೀಶನು ತನ್ನ ಮಾತನ್ನು ಮುಂದುವರಿಸುತ್ತ "ಅದೇಕೆ ಅವರ ಕಡೆ ನೋಡಿ, ಭಯದಿಂದ ಸುಮ್ಮನಾಗುವೆ? ಈ ವ್ಯವಹಾರದ ಬಗ್ಗೆ ಎಲ್ಲ ವಿವರಗಳನ್ನೂ ನೀನು ಹೇಳಲೇಬೇಕು ನೀನು ಭಯಪಡಬೇಕಾಗಿಲ್ಲ ನಿಜ ಹೇಳಿದರೆ ನಿನಗ ಸುಖವಾಗಬದುದು" ಎಂದು ಸೂಚಿಸಿದನು

ಇಷ್ಟಾದರೂ ಆ ಯುವತಿಯು ಮಾತನಾಡಲಿಲ್ಲ ನಿಂತಲ್ಲಿಂದಲೇ ಬಾಗಿಸಿದ ತಲೆಯನ್ನೆತ್ತಲಿಲ್ಲ ಏನನ್ನೋ ಹೇಳಹೋಗಿ, ದುಃಖತುಂಬಿ ಬರಲು ಎರಡೂ ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡು ಹುಡುಗಿಯಂತೆ ಮತ್ತೆ ಅಳತೊಡಗಿದಳು

ನ್ಯಾಯಾಧೀಶನು ಬಹಳ ಕುಶಲನು ಹೆತ್ತ ತಾಯಿಯ ದುಃಖವನ್ನು ಇವಳಲ್ಲಿ ಕಾಣುವ ಸೂಕ್ಷ್ಮದೃಷ್ಟಿ ಅವನಿಗಿತ್ತು ಇವಳ ದುಃಖ ಯಾವುದೋ ಪ್ರಬಲವಾದ ನಿಜಾಂಶವನ್ನು ಮುಚ್ಚಿಡುವಂತೆ ಮಾಡುತ್ತಿದೆಯೆಂದು ಇವನ ಮನಸ್ಸಿಗೆ ಹೊಳೆದಿದ್ದಿತು ಅದನ್ನು ಅವಳ ಬಾಯಿಂದಲೇ ನುಡಿಸಬೇಕೆಂಬ ಸದುದ್ದೇಶದಿಂದ "ನೀನು ಸುಮ್ಮನೇ ಅತ್ತರೆ ಪ್ರಯೋಜನವಿಲ್ಲ. ಎಲ್ಲವನ್ನೂ ಹೇಳಿದೆಯಾದರೆ, ನೀನು ದೋಷಿಯೆಂಬುದು ನಿರ್ಧಾರವಾದರೂ, ನಾವು ನಿನ್ನನು ಕ್ಷಮಿಸಬಹುದು. ಅಧೀರಳಾಗಬೇಡ. ಸರಿಯಾದ ನ್ಯಾಯ ನಿನಗಿಲ್ಲಿ ಖಂಡಿತ ದೊರೆಯುವದು ಕೊಲೆಯಾದ ಆ ಬಾಲಕನ ತಂದೆ ಯಾರು?" ಎಂದು ಕೇಳಿದನು

ಸ್ವಲ್ಪ ಧೈರ್ಯದಿಂದ ಬಾಗಿದ ತಲೆಯನ್ನು ಮೆಲ್ಲನೆ ಎತ್ತಿ, ಆ ಮೂಲೆಯಲ್ಲಿ ಕುಳಿತಿದ್ದ ಶ್ರೀಮಂತ ದಂಪತಿಗಳ ಕಡೆ ಕೈ ತೋರಿಸಿ, "ಆ

ಕೂಸಿನ ತಂದೆ, ನಾನು ಕೆಲಸ ಮಾಡುತ್ತಿರುವ ಮನೆಯ ಯಜಮಾನರ ತಮ್ಮ" ಎಂದು ಹೇಳಿ ಉಕ್ಕಿಬರುವ ದುಃಖವನ್ನು ತಡೆಯಲಾರದೆ, ಅಳ ತೊಡಗಿದಳು ಮಾತು ಮುಂದರಿಯುವುದು ಕಷ್ಟವಾಯಿತು.

"ಸುಳ್ಳು, ಸುಳ್ಳು, ಇದರಲ್ಲೇನೋ ಮೋಸವಿದೆ. ನಮ್ಮ ಮನೆತನದ ಮೇಲೆ ತಪ್ಪನ್ನು ಸುಮ್ಮನೇ ಹಾಕುವಳೇ ಹೊರತು ಇದು ನಿಜವಲ್ಲ" ಎಂದು ಆ ಶ್ರೀಮಂತನ ಹೆಂಡತಿ ಗರ್ಜಿಸಿದಳು.

"ವಿಚಾರಣೆ ನಡೆಯುವಾಗ ಯಾರೂ ನಡುವೆ ಮಾತನಾಡಬಾರದು. ನಿನಗೆ ಭಯವಿಲ್ಲ; ನಿಜವನ್ನು ಹೇಳು. ನಡೆದ ವಿಷಯವನ್ನೆಲ್ಲ ವಿವರಿಸು" ಎಂದು ಅಭಯವಿತ್ತ ನ್ಯಾಯಾಧೀಶನ ಮಾತುಗಳು ಅವಳಿಗೆ ಹೆಚ್ಚು ಧೈರ್ಯ ವನ್ನು ತಂದುಕೊಟ್ಟವು.

"ಆತನೀಗ ಎಲ್ಲಿರುವನು?" ಎಂದು ನ್ಯಾಯಾಧೀಶನು ಮತ್ತೆ ಕೇಳಿದನು

ಅಪರಾಧಿ ತನ್ನ ಮಾತನ್ನು ಮುಂದುವರಿಸಿದಳು: "ಅವನೀಗ ಸೈನ್ಯ ದಲ್ಲಿ ದೊಡ್ಡ ಕೆಲಸದಲ್ಲಿರುವನು ಹೋದ ವರುಷ ಬೇಸಗೆಯ ರಜೆಗೆಂದು ಬಂದು ಇಲ್ಲಿ ಎರಡು ತಿಂಗಳಿದ್ದನು. ಮನೆಯ ಕೆಲಸದಲ್ಲಿ ನಾನು ತೊಡಗಿ ದ್ದಾಗ ಅವನು ಅನೇಕ ಸಲ ನನ್ನ ಕಡೆಗೆ ಮೊದಮೊದಲು ದಿಟ್ಟಿಸಿ ನಗು ನಗುತ್ತ ನೋಡತೊಡಗಿದನು. ಮುಗುದೆಯಾದ ನನಗೆ ಅದರ ಅರ್ಥವಾಗ ಲಿಲ್ಲ. ಮನೆಯಲ್ಲಿ ಗಂಡಸರ ಸಂಪರ್ಕವಿಲ್ಲದೆ ಬೆಳೆದ ನನಗೆ ಅವನ ವರ್ತನೆ ಯಲ್ಲಿ ಸೋದರ ಪ್ರೇಮವಿದೆಯೆಂದು ಭಾವಿಸಿದೆ. ನಿರ್ಗತಿಕಳಾದ ನನ್ನಲ್ಲಿ ಅಭಿಮಾನತೋರುವ ದಯೆಯ ಮಾದರಿ ಇದೆಂದು ನೆನೆದೆ. ದಿನಗಳು ಕಳೆ ದಂತೆಲ್ಲ ಹೆಚ್ಚಿನ ಸಲುಗೆಯಿಂದ ಅವನೊಂದಿಗೆ ಮಾತನಾಡುವದೆಂದರೆ ನನ್ನ ಮನಸ್ಸಿಗೆ ಒಂದು ಬಗೆಯ ಆನಂದವೆನಿಸುತ್ತಿತ್ತು. ನನ್ನವರಾರೂ ಇಲ್ಲದೆ ಬೆಳೆದ ನನ್ನ ಏಕಾಂತ ಜೀವನಕ್ಕೆ ಇವನ ನೆರವು, ಇವನ ಮಾತುಗಳು, ಪ್ರೀತಿಯ ವಚನಗಳ ಮರೆಯಲ್ಲಿ ಕಾಮುಕ ವ್ಯಾಪಾರವಿದೆಯೆಂದು ನನಗೆ ತೋರಿಬರಲಿಲ್ಲ. ದೊಡ್ಡ ಮನೆತನದವನು ನನ್ನನ್ನು ಅವಮಾನಗೊಳಿಸುವ ನೀಚ ಕೆಲಸಕ್ಕೆ ಕೈ ಹಾಕುವನೆಂದು ನೆನೆಯಲಿಲ್ಲ ಮನೆಯವರಿಗೆ ತಿಳಿಸಿದರೆ, ನನ್ನ ಮೇಲೆ ತಪ್ಪು ಹಾಕಿ, ನನ್ನನ್ನು ಕೆಲಸದಿಂದ ಹೊರದೂಡಿದರೆ ಆಗುವ

ಕಷ್ಟದ ಕಲ್ಪನೆಯಿಂದ ಸುಮ್ಮನಿದ್ದೆ. ನನ್ನ ಆಪ್ತ ಬಂಧುವಿನಂತೆ ವರ್ತಿಸುವ ಇವನ ನಡತೆಗೆ; ಮಾತಿನ ಸ್ಪಷ್ಟತೆಗೆ ನಾನು ಮೊಸಹೋದೆ.

"ಒಂದು ದಿನ ಸಂಜೆ ನದಿಯ ದಡದಲ್ಲಿ ನಾನು ಅವನನ್ನು ಕಾಣಬೇಕೆಂದು ಒತ್ತಾಯಪಡಿಸಿದ; ಅಲ್ಲಿಗೆ ಹೋದೆ. ನನ್ನನ್ನು ಕಂಡೊಡನೆ ಹತ್ತಿರ ಬರಮಾಡಿಕೊಂಡು ಅಪ್ಪಿಕೊಂಡ. ಅವನ ಪ್ರೇಮ ಪಾಶದಲ್ಲಿ ಸಿಕ್ಕಿಬಿದ್ದ ನನಗೆ ಆಡುವುದಕ್ಕೆ ಮಾತೇ ಬಾರದಂತಾಯಿತು ಭಯದ ನೋಟದಿಂದ ಅವನನ್ನೇ ದಿಟ್ಟಿಸಿ ನೋಡಿದೆ ಅಂದವನು ನನಗೆ ಆಡಿದ ಪ್ರೀತಿಯ ಮಾತುಗಳು, ತೋರಿದ ಆಶೆ, ಇತ್ತ ಅಭಯ ವಚನಗಳನ್ನು ಇಲ್ಲಿ ವಿವರಿಸಿದರೆ ಜನರು ಸುಳ್ಳೆನ್ನಬಹುದು ಅಂತಹ ಸ್ಥಿತಿಯಲ್ಲಿ ನಾನು ಸುಲಭವಾಗಿ ಅವನಿಗೆ ಒಳಗಾದೆ ನನ್ನನ್ನುಮದುವೆಯಾಗುವೆನೆಂದು ನಿಶ್ಚಿತ ವಚನವನ್ನಿತ್ತ. ತಾನುಮರಳಿ ಕೆಲಸಕ್ಕೆ ಹೋದನಂತರ, ಮನೆಮಾಡಿ ಕರೆಯಿಸಿಕೊಳ್ಳುವೆನೆಂದು ಹೇಳಿದ. ನಮ್ಮ ಪ್ರೇಮ ವ್ಯವಹಾರ ಮುಂದೆ ಒಂದು ತಿಂಗಳು ನಡೆಯಿತು. ಮನೆಯವರಿಗೆ ಇದನ್ನು ತಿಳಿಸುವುದು ಉಚಿತವೆಂದು ನಾನು ಸೂಚಿಸಿದೆ. ಸದ್ಯದಲ್ಲಿ ಬೇಡವೆಂದು ತಡೆದ ಅವನ ಮರುಳು ಮಾತಿಗೆ ಬೆರಗಾಗಿ ಸುಮ್ಮನಿದ್ದೆ. ರಜೆ ಮುಗಿದ ನಂತರ ಅವನು ಕೆಲಸಕ್ಕೆಂದು ಹೊರಟುಹೊದ ತಿಂಗಳೆರಡಾದರೂ ಮದುವೆಯ ಬಗ್ಗೆ, ನನ್ನನ್ನು ಕರೆಯಿಸಿಕೊಳ್ಳುವ ವಿಷಯದ ಬಗ್ಗೆ, ಪತ್ರಗಳು ಬರಲೇ ಇಲ್ಲ

"ಮುಂದೆರಡು ತಿಂಗಳು ಕಳೆದ ನಂತರ ನಾನು ಗರ್ಭಿಣಿ ಎಂಬುದು ನನಗೆ ತಿಳಿಯಿತು ನನ್ನ ದುಃಖ ಇಮ್ಮಡಿಸಿತು ಇದು ಮನೆಯವರಿಗೆ ತಿಳಿದರೆ ನನ್ನ ಕೆಲಸ ಹೋಗಿ, ಜೀವಿಸುವ ವಿಧಾನವು ಹೇಗೆ ಎಂದು ಮನದೊಳಗೇ ಕೊರಗಿದೆ. ಮುಂದೆ " ಎಂದು ಹೇಳಲು ಮಾತು ಬಾರದೆ ಮುಖ ಮುಚ್ಚಿಕೊಂಡಳು. ಹೃದಯವಲ್ಲಾಗುವ ಸಂಕಟವನ್ನು ತಡೆಯಲಾರದೆ ಸುಮ್ಮನಾದಳು. "ಮುಂದೇನಾಯಿತು ?" ಎಂದು ನ್ಯಾಯಾಧೀಶನು ಮತ್ತೆ ಕೇಳಿದ.

"ಆಗುವುದೇನು? ಸರ್ವನಾಶ! ಯಾತನೆಯ ಜೀವನ; ನಿಜವನ್ನು ಮುಚ್ಚಿಡಲು ಸುಳ್ಳು ಪ್ರಯತ್ನ ತಮ್ಮೆದುರು ಸಾಕ್ಷಿಯನ್ನಿತ್ತ ದಾದಿಯ ಸಹಾಯವನ್ನು ಬೇಡಿದೆ. ಮನೆಯವರಿಗೆ ತಿಳಿಯದಂತೆ ಬಹು ಎಚ್ಚರದಿಂದ

ಇರತೊಡಗಿದೆ ಸುದೈವದಿಂದ ಮನೆಯ ಯಜಮಾನರಿಬ್ಬರೂ ಮನೆಯ ಕೆಲಸಕ್ಕೆಂದು ಅವರು ಹಳ್ಳಿಗೆ ಹೋಗಿ ಅಲ್ಲಿಯೇ ನಿಂತುಬಿಟ್ಟರು. ಇದೊಂದು ದೇವರು ದಯಪಾಲಿಸಿದ ಕೃಪೆಯೆಂದು ಸಮಾಧಾನಹೊಂದಿದೆ. ಅಂತೂ ಯಾತನೆಯಲ್ಲಿ ಕಾಲ ಕಳೆದೆ. ಹಡೆಯುವ ದಿನಗಳು ಸಮೀಪಿಸಿದಂತೆಲ್ಲ ಬಹು ಎಚ್ಚರದಿಂದ ಇರತೊಡಗಿದೆ. ಮಗು ಜನನವಾದರೆ ಅದರ ಆರೈಕೆಗೆಂದು ಅನೇಕ ಸಾಮಾನುಗಳನ್ನು ಜತೆ ಮಾಡಿದೆ ಚಿಕ್ಕ ಪುಟ್ಟ ಉಡುಗೆಗಳನ್ನು ಹೊಲಿದು ಇಟ್ಟುಕೊಂಡೆ ಅರಿವೆ ಅಂಗಡಿಯವನ ಸಾಕ್ಷಿಯಿಂದ ಇದು ನಿರ್ಧಾರವಾಗುವುದು. ಮಿತವ್ಯಯದಿಂದ ಕಾಲಹರಣಮಾಡಿ, ಮುಂದೆ ಮನೆಯವರು ನನ್ನನ್ನು ಕೆಲಸದಿಂದ ತೆಗೆದು ಹಾಕಿದರೆ ಅನುಕೂಲವಾಗುವದೆಂದು ಹಣವನ್ನು ಕೂಡಿಹಾಕಿದೆ. ಬಾನ ಬಯಲಿನಲ್ಲಿ, ನನ್ನ ಬಡಹೊಟ್ಟೆಯಿಂದ ಬರುವ ಆ ನನ್ನ ಮುದ್ದು ಕಂದಮ್ಮನ ಜೋಪಾನಕ್ಕೆಂದು ಸರ್ವಸಿದ್ಧತೆಯನ್ನೂ ಮಾಡಿಕೊಂಡೆ ”

“ ಆದರೆ ಮಗುವನ್ನೇತಕ್ಕೆ ಕೊಂದುಬಿಟ್ಟೀ ”

ಅವಳು ಮೌನದಿಂದ ಸುಮ್ಮನಿದ್ದಳು.

“ ಮಗುವನ್ನು ಕೊಲ್ಲುವ ಇಚ್ಛೆ ನಿನಗಿರಲಿಲ್ಲವೇ ? ”

“ ಹೆತ್ತ ತಾಯಿಯ ಹೃದಯವನ್ನರಿಯುವ ಸೂಕ್ಷ್ಮ ಬುದ್ಧಿಯುಳ್ಳ ನಿಮಗೆ ನಾನು ಬೇರೆ ಹೇಳಬೇಕಾಗಿಲ್ಲ ” ಮತ್ತೆ ಮೌನ.

“ ಮುಂದೇನಾಯಿತು ? ”

“ ಒಂದು ದಿನ ರಾತ್ರಿ ಕೆಲಸದಿಂದ ಮನೆಗೆ ಹಿಂತಿರುಗುವ ವೇಳೆಗೆ ಸರಿಯಾಗಿ ಹಡೆಯುವ ಬೇನೆ ಆರಂಭವಾದಂತೆನಿಸಿತು ಮಾಳಿಗೆಯ ಮೇಲೊಂದು ಕೋಣೆಯನ್ನು,—ನನಗಾಗಿ ಮನೆಯವರು ಏರ್ಪಡಿಸಿದ್ದರು,— ಎಲ್ಲವನ್ನೂ ವ್ಯವಸ್ಥೆ ಮಾಡಿಕೊಂಡಿದ್ದೆ ಪ್ರಸವವೇದನೆ ನನಗೆ ಹೊಸದಾದುದರಿಂದ ಸ್ವಲ್ಪ ಕಷ್ಟವೆನಿಸಿತು ಮಂತ್ರಸಾನಿಯು ಹೇಳಿದ ಕ್ರಮದಂತೆ ನಡೆದುಕೊಂಡೆ. ಸುಖಪ್ರಸವದಿಂದ ಗಂಡುಮಗು ಜನನವಾಯಿತು. ಮನದೊಳಗೆ ಆನಂದವಾಯಿತು. ಮಗುವನ್ನೆತ್ತಿ ಹಾಸಿಗೆಯ ಮೇಲೆ ಮಲಗಿಸಿದೆ. ಮಾಡುವ ವಿಧಾನವೆಲ್ಲವನ್ನೂ ನಾನೇ ಮಾಡಿದೆ. ಹೊಟ್ಟೆ ನೋವು ಅಲ್ಲಿಗೆ ನಿಲ್ಲಲಿಲ್ಲ. ಮತ್ತೆ ಹೆಚ್ಚಿನ ವೇಗದಿಂದ ಬೇನೆ ಆರಂಭವಾಯಿತು. ಮತ್ತೊಂದು

ಗಂಡುಮಗು ಜನಿಸಿತು ಎರಡನೆಯ ಮಗುವನ್ನು ನನ್ನ ಬಿಳಿಯ ಹಾಸಿಗೆಯ ಮೇಲೆ ಮೊದಲ ಕೂಸಿನ ಮಗ್ಗುಲಲ್ಲಿ ಮಲಗಿಸಿದೆ. ನಂತರ ಕೋಣೆಯೆಲ್ಲವನ್ನೂ ಸ್ವಚ್ಛ ಪಡಿಸಿದೆ.

"ನಿರ್ಗತಿಕಳಾದ ನಾನು ಎರಡು ಮಕ್ಕಳ ತಾಯಿ! ನನ್ನ ಸಂಬಳದಿಂದ ಒಬ್ಬಳೆ ಜೀವನ ನಡೆಸಲು ಅಸಾಧ್ಯವೆನಿಸಿದಾಗ, ಈ ಅವಳಿ ಕಂದಮ್ಮಗಳ ಆರೈಕೆ! ಇಂತಹ ಬಡವಳಲ್ಲಿ ಇವುಗಳು ಸುಖದ ಬಾಳನ್ನು ಕಾಣಬಹುದೇ? ಮುಂದೆ ಜೀವಿಸಿದರೂ ಯಾರ ಹೆಸರನ್ನು ಹೇಳಿ ಜೀವಿಸಬೇಕು? ತಂದೆಯಾರು? ತಂದೆಯೆಂಬುವನೊಬ್ಬನಿದ್ದರೂ ಅವನು ಇವರು ತನ್ನವರೆಂದು ಒಪ್ಪಿಕೊಳ್ಳುವನೇ? ನಾನು ಬರೆದ ಪತ್ರಗಳಿಗೆ ಅವನು ತಾಳಿದ ಮೌನದಿಂದ ಈ ಬಾಲಕರು ಅನಾಥರಾಗಿಯೇ ಬಾಳಬೇಕು ಬಡತನದಲ್ಲಿ ಬೆಳೆದು, ತಂದೆಯಾರೆಂದು ತಿಳಿಯದಲೆ ನಮ್ಮ ತಾಯಿ ಕೆಟ್ಟನಡತೆಯವಳೆಂದು ತಿಳಿದರೆ ಮಕ್ಕಳಿಗೆ ತನ್ನ ಮೇಲೆ ಪ್ರೀತಿ ಇರುವುದೆ? ಅದೇನೇ ಇರಲಿ, ಈಗ ಇವರನ್ನು ಆರೈಸುವ ವಿಧಾನವೆಂತು? ಇದೇ ಒಗೆಯ ಪ್ರಶ್ನೆಗಳು ನನ್ನ ತಲೆ ಕೆಡಿಸಿದವು ಹುಚ್ಚಳಂತೆ ಕೋಣೆಯಲ್ಲಿ ಹರಿದಾಡಿದೆ ದುಃಖವು ಹೆಚ್ಚಿತು ದಣುವಿನಿಂದ ಮೈಯಲ್ಲಿ ಎಚ್ಚರವಿರಲಿಲ್ಲ ನಾನೇನು ಮಾಡುವೆನೆಂಬ ಕಲ್ಪನೆಯೇ ನನಗಿರಲಿಲ್ಲ ಹಾಸಿಗೆಯ ಮೇಲೆ ಮಲಗಿ ನಿದ್ರಿಸುವ ಆ ಕಂದಮ್ಮಗಳನ್ನು ನೋಡಿದೆ ಎದೆ ದಸ್ಸೆಂದಿತು! ಪಕ್ಕದಲ್ಲಿದ್ದ ತಲೆದಿಂಬನ್ನು ಆ ಹುಡುಗರ ಮೇಲೆಸೆದು ನಾನೂ ಆವೇಶದಲ್ಲಿ ಆ ದಿಂಬಿದ ಮೇಲೆ ಎಚ್ಚರ ತಪ್ಪಿ ಬಿದ್ದುಬಿಟ್ಟೆ ಅದುವೆ ನನ್ನ ನೆನಪು. ಎಚ್ಚರವಿಲ್ಲದೆ ಮೂರ್ಛೆ ಹೋಗಿದ್ದೆ. ನಸುಕಿನಲ್ಲಿ ಎದ್ದು ನೋಡಲು ಅವುಗಳು ಸಾವಿನ ಉಡಿಯಲ್ಲಿ ಪೂರ್ಣ ನಿದ್ರೆಯಲ್ಲಿದ್ದವು. ನನ್ನ ಈ ಪಾಪಕೃತ್ಯ ನಿರ್ಮಲನಾದ ಸೂರ್ಯನಿಗೆ ತಿಳಿಯಬಾರದೆಂದು, ತೋಟಲ್ಲಿಯೇ ಕುಣಿಗಳನ್ನಗಿದು ಅವರನ್ನು ಹೂಳಬೇಕಾಯಿತು. ಹೂಳಿಡುವ ಕೆಲಸ ಬಹಳ ದಣುವನ್ನುಂಟುಮಾಡಿತು

"ಆಯಾಸದಿಂದ ಅಂದು ಜ್ವರ ತಲೆದೋರಿತು. ಎಚ್ಚರವಿಲ್ಲದೆ ಏನೇನೋ ಕನವರಿಸಿದೆ. ಅಡಿಗೆಯವಳು ಬಂದು ಇದೆಲ್ಲವನ್ನೂ ಕಂಡು, ಡಾಕ್ಟರರನ್ನು ಕರೆಯಿಸಿ ವಿಚಾರ ಮಾಡಲಾಗಿ, ಎಲ್ಲವೂ ಹೊರಬಿದ್ದಿತು. ಮೂರನೆಯ ದಿನ ಮನೆಯವರೂ ಬಂದರು ಮುಂದಿನ ವಿಷಯ . ." ಎಂದು

ನುಡಿದು ಸುಮ್ಮನಾದಳು. ಮೊದಲಿಗೆ ತನ್ನ ಕರುಣಕತೆಯನ್ನು ಹೇಳಲು ಭಯಗೊಂಡ ಇವಳ ಮುಖವು ಈಗ ನಿರ್ಭಯದ ಮುದ್ರೆಯನ್ನು ತಾಳಿತ್ತು. ದುಃಖದ ಛಾಯೆ ಮಾಯವಾಗಿತ್ತು. ನಿಜವನ್ನು ಹೇಳಿದೆನಲ್ಲವೆಂಬ ಆತ್ಮ ಸಂತುಷ್ಟಿಯ ಹೊಳಪು ಕಾಣುತ್ತಿತ್ತು.

" ಎರಡನೆಯ ಮಗುವನ್ನೆಲ್ಲಿ ಹೂಳಿಟ್ಟಿರುವಿ ? "

" ನಿಮಗೆ ದೊರಕಿದ ಮಗುವೆಲ್ಲಿಯದು ? "

" ಒಂದು ಗಿಡದ ಬುಡದಲ್ಲಿ "

" ಎರಡನೆಯ ಮಗುವನ್ನು ನಾನು ದಿನವೂ ಮಲಗುವ ಕೋಣೆಯ ಕಿಡಕಿಯ ಕೆಳಗೆ ಗಿಡಬಳ್ಳಿಗಳ ಮರೆಯಲ್ಲಿ " ಎಂದು ಹೇಳುವಾಗ ಅಳುವನ್ನು ತಡೆಯುವ ಅವಳ ಯತ್ನ ಕೈಮೀರಿತು. ಅವಳ ತುಟಿಗಳೆರಡೂ ಅದುರಿದವು ಯಾತನೆಯ ಭಾವಗಳು ಉದ್ರೇಕಗೊಂಡು ಅವಳು ಮತ್ತೆ ಕೈಗಳಿಂದ ಮುಖ ಮುಚ್ಚಿಕೊಂಡು ಅಳತೊಡಗಿದಳು.

ಈ ವಿಚಾರಣೆಯನ್ನು ನ್ಯಾಯಾಧೀಶನು ಪೂರ್ಣ ಕೇಳಿ, ಜೂರಿಯವರ ಅಭಿಪ್ರಾಯವೂ ತನ್ನ ನಿರ್ಣಯದಂತೆ ಏಕೀ ಭವಿಸಿದುದರಿಂದ, ಅಪರಾಧಿಯು ನಿರ್ದೋಷಿಯೆಂದು ನಿರ್ಣಯವನ್ನು ಹೇಳಿ, ನೀಚರೂ ಕಾಮುಕರೂ ಹಣದ ಲಾಲಸೆಯಲ್ಲಿ ಬಡಜನರ ಮಾನಾಪಮಾನಗಳ ಕಡೆ ಲಕ್ಷ್ಯವಿರದ ಶ್ರೀಮಂತರ ವರ್ತನೆಯನ್ನು ಖಂಡಿಸುತ್ತ, ಇವಳನ್ನು ಇಂತಹ ಯಾತನೆಗೆ ಗುರಿಮಾಡಿದ ಆ ಯುವಕನಿಗೆ ಶಿಕ್ಷೆ ವಿಧಿಸುವ ಕ್ರಮ ನಡೆಯಬೇಕೆಂದು ಸೂಚಿಸಿದನು ಇವಳ ದುಃಖಮಯ ಕತೆಯನ್ನು ಕೇಳಿ ಊರಿಗೆ ಊರೇ ಮರುಗಿತು.

—Rosalie Prudent

---

# ಕೃತಜ್ಞತೆ

" ಏನ್ರೀ ಏನ್ರೀ, ಇಲ್ಲಿ ನೋಡ್ರಿ. ನನ್ನ ಹಿಂದೆ ನೀವು ನನ್ನ ಮನೆಗೆ ಬರುವುದಾದರೆ, ನಿಮಗೆ ನಮ್ಮ ಮನೆಯಲ್ಲಿ ಬೆಚ್ಚಗೆ ರಾತ್ರಿಯೆಲ್ಲವೂ ಕಳೆಯಲು ಅನುಕೂಲ ಬರುವಿರಾ? ನೀವು ಕಪ್ಪಗಿದ್ದರೂ ನಿಮ್ಮ ಮುಖದಲ್ಲಿ ಕಳೆ ಇದೆ." ಎಂಬ ಮಾತುಗಳಿಂದ ಫ್ಯಾನೀ ಸಂಜೆ ಸಮಯದಲ್ಲಿ ನಗರದ ದಿವ್ಯವಾದ ತೋಪಿನ ಹತ್ತಿರ ಕಾಲುರಸ್ತೆಯ ಬಳಿ ನಿಂತು ಅಲ್ಲಿ ಹಾದು ಹೋಗುವ ವಿಟರನ್ನು ಕರೆಯ ಹತ್ತಿದಳು. ಇವಳ ಆಶಾಪೂರಿತ ಮಾತುಗಳಾಗಲಿ, ಅಂಥ ಚಳಿರಾತ್ರಿಯಲ್ಲಿ ಮಲಗಲು ಬೆಚ್ಚನ ಮನೆ ಸಿಗುವ ಆಶೆಯಾಗಿ, ಇವಳ ಚೆಲುವಾಗಲಿ, ಯಾರನ್ನೂ ಆಕರ್ಷಿಸಲಿಲ್ಲ. ಅಲ್ಲಿಗೆ ಬರುತ್ತಿದ್ದ ಜನ ಇಂತಹ ಬಿನ್ನಾಣದ ಮಾತುಗಳಿಗೆ ಮೋಸಹೋಗಿ, ಜಾಲದಲ್ಲಿ ಬೀಳುವಂತವರಾಗಿದ್ದಿಲ್ಲ. ಯಾರಾದರೂ ವಿಟರ ನೆರವು ಸಿಕ್ಕೇತೀರುದೆಂಬ ಆಸೆಯಿಂದ ಈ ಹವ್ಯಾಸಕ್ಕೆ ಇಳಿದ ಫ್ಯಾನೀಗೆ ರಾತ್ರಿ ಮುಂದರಿದಂತೆಲ್ಲ ನಿರಾಶೆ ತಲೆದೋರಿತು. ಸ್ವಲ್ಪ ವೇಳೆ ಕಳೆಯಿತೆಂದರೆ ಪೋಲಿಸರ ನಿರ್ಬಂಧದ ಮೇರೆಗೆ ತಾನು ಸುಮ್ಮನೇ ಮನೆಗೆ ಹಿಂತಿರುಗಬೇಕಾದರೆ ರಾತ್ರಿ ಕಳೆಯುವುದು ಹೇಗೆಂದು ಮನದೊಳಗೆ ಮರುಗಿದಳು. ವನದ ಸುತ್ತಲಿನ ರಸ್ತೆಯನ್ನು ಸುತ್ತುವುದು ಮುಗಿಸಿ ಆಯಿತು ಇಷ್ಟಾದರೂ ಯಾರ ನೆರವೂ ದೊರೆಯದಿದ್ದುದು ಅವಳಿಗೆ ಆಶ್ಚರ್ಯವೆನಿಸಿತು

ಫ್ಯಾನೀಯು ಬೀದಿಯ ಬಸವಿಯಂತಹ ಕೀಳು ಅವಸ್ಥೆಯಲ್ಲಿದ್ದರೂ ಅವಳ ವರ್ತನೆಯಲ್ಲಿ ಮೋಸವಿರಲಿಲ್ಲ ಕೇವಲ ಉದರ ಪೋಷಣೆಗೆಂದು ಈ ನೀಚ ಕೆಲಸಕ್ಕಿಳಿದ ಇವಳು ಅನೇಕ ವೇಳೆ ತನ್ನ ಹಾಳುಬಾಳಿನ ಬಗ್ಗೆ ಮರುಗುತ್ತಿದಳು ತಾನಿಷ್ಟು ವರುಷ ಜೀವಿಸಿದರೂ ತನ್ನಲ್ಲಿ ನಿಜವಾದ ಕಲಾ

ಹೋಯಿತು. ಒಂದು ದಿನದ ಜೀವನಕ್ಕೆ ಬೇಕಾದ ಕನಿಷ್ಟ ಐದು ಫ್ರಾಂಕಿನಷ್ಟು ಹಣ ದೊರೆಯದೇ ಇದ್ದುದು ದುಃಖಮಯವಾದರೆ ಮಾರನೆಯ ದಿನ ಹೇಗೆ ಕಳೆಯಬೇಕೆಂಬ ದುರಂತ ಯೋಚನೆ ಫ್ಯಾನೀಯನ್ನು ವೇದಿಸತೊಡಗಿತು ತನ್ನಲ್ಲಿ ಅಡಗಿರುವ ಕಲೆಯ ಉಪಯೋಗ ಜನರಿಗೆ ತಿಳಿದು, ತಾನೊಬ್ಬ ಗಣ್ಯವ್ಯಕ್ತಿ ಆಗುವಳೆಂಬ ಆಶೆ ಎಂದು ಕೊನೆಗಾಣುವುದೆಂಬುದನ್ನು ಯೋಚಿಸತೊಡಗಿದಳು

ಸ್ವಲ್ಪ ಕಾಲದ ನಂತರ ಇಡೀ ಪ್ಯಾರಿಸ ನಗರವನ್ನೇ ಮೋಹಗೊಳಿಸಿ, ತನ್ನ ಜಾಲದಲ್ಲಿ ಬೀಳುವಂತೆ ಮಾಡಲು ಶಕ್ತಿಯುಳ್ಳ ಇವಳು, ಅಂದು ಬೀದಿಯಲ್ಲಿ ಒಂದು ದಿನದ ಆಹಾರಕ್ಕಾಗಿ ವಿಟರನ್ನು ಹುಡುಕಿ ನಿರಾಶೆಗೊಳ್ಳಬೇಕಾಯಿತು ಅವಳ ಇಪ್ಪತ್ತುಮೂರನೇ ವಯಸ್ಸಿನಲ್ಲಿಯೇ ಇಂತಹ ಅವಸ್ಥೆ ಬಂದೊದಗಿನುದು ವಿಷಾದದ ವಿಷಯವೇ ಸರಿ

ರಾತ್ರಿ ಮುಂದರಿಯಿತು. ಬೀದಿಗಳೆಲ್ಲವೂ ನಿರ್ಜನವಾದವು ಕತ್ತಲಿನ ಆ ಡಿಸೆಂಬರ ರಾತ್ರಿಯಲ್ಲಿ ಎಲ್ಲ ವಾತಾವರಣವೂ ಭೀಕರವಾಗಿ ಕಂಡುಬಂತು ಅಲ್ಲಲ್ಲಿ ಪೋಲಿಸರ ತಪಾಸಣೆ ಹೆಚ್ಚತೊಡಗಿತು ಮುಂದೆ ಹೆಚ್ಚು ಸಮಯ ಉಳಿಯುವುದು ಅಪಾಯಕರವೆನಿಸಿ. ಮನೆಗೆ ಹಿಂತಿರುಗಬೇಕೆಂದು ನಿಶ್ಚಯಿಸಿದಳು.

ಇನ್ನೇನು ಮನೆಯನ್ನು ಸೇರಬೇಕೆಂದು ಬೀದಿಯ ಕೊನೆಯಲ್ಲಿ ತಿರುಗುವ ಹೊತ್ತಿಗೆ, ದೂರದಲ್ಲಿದ್ದ ದೀಪಸ್ತಂಭದ ಕೆಳಗೆ ಯಾವುದೋ ಒಂದು ಗಿಡ್ಡ ವ್ಯಕ್ತಿ ನಿಂತಿರುವಂತೆ ಫ್ಯಾನೀಗೆ ಕಾಣಿಸಿತು ಅವಳ ಆಶಾಜ್ಯೋತಿ ಚಿಗುರಿದಂತೆನಿಸಿತು ಹರುಷಗೊಂಡು ಅಲ್ಲಿಗೆ ಅವಸರದಿಂದ ನಡೆದಳು. ಆ ವ್ಯಕ್ತಿ ಇದ್ದ ಸ್ಥಳಕ್ಕೆ ಹೋಗುವ ಹೊತ್ತಿಗೆ, ಆವ್ಯಕ್ತಿ ಕೆಳಗೆ ಬೀಳುವಂತೆ ಕಂಡುಬಂತು. ಬೀಳದ ಅದನ್ನು ತಡೆಯಬೇಕೆಂದು ಸಮೀಪಿಸುವ ಹೊತ್ತಿಗೆ ನೆರಳಿನಲ್ಲಿ ಆವ್ಯಕ್ತಿ ಮೆಲ್ಲನೆ ಮುದುಡಿಕೊಂಡು ನೆಲಕ್ಕುರುಳಿದ್ದಿತು.

ಹತ್ತಿರ ಹೋಗಿ ಕಂಬಳಿಯಿಂದ ಮುಚ್ಚಿದ ಆ ಮುದ್ದೆಯ ಕೆಳಗೆ ಹನ್ನೆರಡು ವರುಷದ ಬಾಲಕನು ಅರೆಜೀವದಿಂದ ಉಸಿರಿಡುತ್ತಿದ್ದುದನ್ನು ಕಂಡಳು. ಈ ಸಂಕಟ ದೃಶ್ಯವನ್ನು ನೋಡಿ ಹತಾಶಳಾದಳು ಅಷ್ಟರಲ್ಲೇ ಆ ಬಾಲಕನು ಮೆಲ್ಲಗೆ ಕ್ಷೀಣ ಸ್ವರದಲ್ಲಿ “ನನಗೆ ಆರು ದಿನಗಳಿಂದ ಆಹಾರವಿಲ್ಲ ಹಸಿವೆ

ಯಿಂದ ನಿತ್ರಾಣ, ಮೇಲೆ ಚಳಿಯಿಂದ ನಡುಕವೂ ಬಹಳ. ನನಗೆ ಆಶ್ರಯ; ಕೊಡಲಾರಿರಾ?" ಎಂದು ನುಡಿದ ಅವನ ಮಾತು ಕೇಳಿ ಫ್ಯಾನೀಯ ಹೃದಯ ಕರಗಿತು.

"ನನ್ನ ಪ್ರೀತಿಯ ಮಗು, ನಿನಗೆ ಭಯ ಬೇಡ." ಎಂದು ಆ ಮಗುವನ್ನು ಎತ್ತಿಕೊಂಡು ಬೇಗ ಮನೆಗೆ ನಡೆದಳು ದಾರಿಯಲ್ಲಿ ಆ ಮಗು ಬಿಕ್ಕಿ ಬಿಕ್ಕಿ ಅಳತೊಡಗಿತು ಅವನಿಗೆ ಧೈರ್ಯ ಹೇಳುತ್ತ "ಮಗೂ ಅಳಬೇಡ ಇಗೋ ನನ್ನ ಮನೆ ಬಂದೇಬಿಟ್ಟಿತು. ಅಲ್ಲಿ ನಿನ್ನನ್ನು ಬೆಚ್ಚನ ಹಾಸಿಗೆಯ ಮೇಲೆ ಮಲಗಿಸುವೆ" ಎಂದು ಸಮಾಧಾನ ಹೇಳುತ್ತ ಮನೆ ಸೇರಿದಳು.

ಮಲಗುವ ಕೋಣೆಗೆ ಹೋದ ಕೂಡಲೇ, ಆ ಮಗು ಹಿಗ್ಗಿನಿಂದ "ಅಹಾ, ಎಷ್ಟು ಬೆಚ್ಚಗಿದೆ, ಇಲ್ಲಿ! ನನಗೆ ಇಲ್ಲಿ ಬಹು ಸುಖವೆನಿಸುತ್ತದೆ. ಆರು ದಿನಗಳಿಂದ ದಿನರಾತ್ರಿ ಸಹಾ ಬೀದಿಯಲ್ಲೇ ಕಳೆದಿದ್ದೇನೆ ಹಸಿವಾಗುತ್ತಿದೆ ಏನಾದರೂ ತಿನ್ನಲು ಕೊಡುವೆಯಾ, ಮಹಾತಾಯಿ?" ಎಂದು ಬೇಡಿದನು

ಮಾರನೆಯ ದಿನಕ್ಕೆಂದು ಕಾದಿಟ್ಟ ಸಣ್ಣ ಬ್ರೆಡ್ ತುಂಡನ್ನು, ಸ್ವಲ್ಪ ಬ್ರಾಂಡಿ ಪಾನೀಯವನ್ನು ಕೊಂಚ ಬಿಸ್ಕೀಟನ್ನು ಆಶೆಯಿಂದ ತಿಂದನಂತರ ಅವನಿಗೆ ತನ್ನ ಕತೆಯನ್ನು ಹೇಳಲು ಶಕ್ತಿ ಬಂದಿತು ತನ್ನ ಕತೆಯನ್ನು ಸರಳ ಮಾತಿನಲ್ಲಿ ಹೇಳತೊಡಗಿದ

ಚಿತ್ರಗಾರನಾದ ಅವನ ತಾತ ಒಂದು ತಿಂಗಳ ಹಿಂದೆ ಮುಪ್ಪಿನಿಂದ ಮರಣಹೊಂದಿದ ಅವನು ಸಾಯುವಮುನ್ನ ಒಂದು ದಿನ ಹೀಗೆ ಹೇಳಿದ್ದ: "ಮಗೂ, ನನ್ನ ಸಾವಿನ ನಂತರ ನೀನು ಪ್ಯಾರಿಸ ನಗರದಲ್ಲಿ ನನ್ನ ತಮ್ಮನ ಹತ್ತಿರ ಹೋಗು. ಅವನಿಗೆ ಬರೆದ ಕಾಗದವೊಂದು ನನ್ನ ಕಿಸೆಯಲ್ಲಿದೆ. ಅದನ್ನು ಅವನಿಗೆ ನೀನು ತೋರಿಸಿದರೆ, ನಿನಗೆ ಎಲ್ಲ ಸಹಾಯವನ್ನು ಮಾಡುವನು ನಿನಗೆ ಈ ಚಿತ್ರಕಲೆಯಲ್ಲಿ ಹೆಚ್ಚು ಅಭಿರುಚಿ ಇರುವುದರಿಂದ ನೀನು ಪ್ಯಾರಿಸ ನಗರದಲ್ಲಿ ಹೆಸರು ಗಳಿಸುವಿ. ಈ ವಿದ್ಯೆ ನಿನಗೆ ಕೀರ್ತಿ ಸಂಪತ್ತುಗಳನ್ನು ತಂದುಕೊಡುವುದು."

ಅವನ ತಾತನ ಮರಣಾನಂತರ ಮನೆಯಲ್ಲಿ ಇದ್ದ ಮೂವತ್ತು ಫ್ರಾಂಕುಗಳನ್ನು ಆತನ ಹಳೆಯ ಕೋಟಿನ ಕಿಸೆಯಲ್ಲಿರಿಸಿಕೊಂಡು ಅದನ್ನು

ಧರಿಸಿಕೊಂಡು ಆ ಕಾಗದದೊಂದಿಗೆ ಪ್ಯಾರಿಸ ನಗರಕ್ಕೆ ಪಾದಚಾರಿಯಾಗಿ ಹೊರಟ. ಪ್ಯಾರಿಸ ನಗರದಲ್ಲಿ ವಿಚಾರಿಸಲಾಗಿ ಆ ಹೆಸರಿನ ಮನುಷ್ಯನೇ ಇರಲಿಲ್ಲವೆಂದು ಕಂಡುಬಂತು. ಹುಡುಕಿ ಹುಡುಕಿ ಆ ಹುಡುಗ ಬೇಸತ್ತು ಬೇಜಾರು ಹೊಂದಿದ. ತನ್ನ ತಾತನ ತಮ್ಮನು ಆರು ವರುಷಗಳ ಹಿಂದೆ ಆ ಊರನ್ನೇ ತೊರೆದು ಎಲ್ಲಿಗೋ ಹೋಗಿಬಿಟ್ಟಿದ್ದನಂತೆ. ತಮ್ಮ ಊರಿನಿಂದ ಪ್ಯಾರಿಸ ನಗರಕ್ಕೆ ಬಂದು ಸೇರುವುದಕ್ಕೆ ಗಾಡಿಯವನಿಗೆ ಕೊಟ್ಟು ಉಳಿದ ಹಣದಿಂದ ಸ್ವಲ್ಪ ದಿನ ಕಳೆದನಂತರ, ಅಂದಿಗೆ ಆರು ದಿನಗಳ ಪರ್ಯಂತ ಉಪವಾಸವಿರಬೇಕಾಯಿತು ಮಲಗುವುದಕ್ಕೆ ನೆರಳಿಲ್ಲದೆ ಅಲೆದಲೆದು ಬೇಸತ್ತು ಹಣ್ಣಾಗಿದ್ದ. ಆ ಅವಸ್ಥೆಯಲ್ಲಿ ಫ್ಯಾನೀಯ ನೆರವು ದೊರೆಯಿತು. ತನ್ನವಸ್ಥೆ ಹೀಗಾಯಿತೆಂದು ದುಃಖಿಸಿ ದುಃಖಿಸಿ ನಡುನಡುವೆ ತಡೆತಡೆದು ತನ್ನ ಕರುಣಾಜನಕ ಕತೆಯನ್ನು ವಿವರಿಸಿದ

ಆರು ದಿನಗಳಿಂದ ಅಲೆದಲೆದು ದಣಿದ ಅವನ ಶರೀರ ವಿಶ್ರಾಂತಿ ಬೇಡುತ್ತಿತ್ತು. ಅವನ ಕಣ್ಣುಗಳು ನಿದ್ರೆಯ ಭಾರದಿಂದ ಮುಚ್ಚತೊಡಗಿದವು. ಅರ್ಧ ಅರ್ಧ ಬಿಕ್ಕುತ್ತ ಅರೆ ಮಾತಿನಲ್ಲಿ ಅವನು ಏನನ್ನೋ ಹೇಳುತ್ತಿರಲು ಫ್ಯಾನೀಯು ಮರುಕಗೊಂಡು ಅವನನ್ನು ಮೆತ್ತನ ಹಾಸಿಗೆಯಲ್ಲಿ ಮಲಗಿಸಿದ ಕೂಡಲೇ ಆ ಮಗುವು ನಿದ್ರೆ ಮಾಡತೊಡಗಿದ. ತಾನೂ ಅವನ ಪಕ್ಕದಲ್ಲಿಯೇ ಮಲಗಲು ಬೇಗನೇ ಅವಳಿಗೂ ನಿದ್ರೆ ಹತ್ತಿತು.

ಮಾರನೆಯ ದಿನ ನೆರಮನೆಯವರಿಂದ ಸಾಲ ತಂದು ಹೋಟೆಲಿನಲ್ಲಿ ಇಬ್ಬರೂ ಮಧ್ಯಾಹ್ನದ ಊಟ ಮುಗಿಸಿದ ನಂತರ ಸಂಜೆ ಆಗುವವರೆವಿಗೂ ಮನೆಯಲ್ಲಿದ್ದು ಅವನಲ್ಲಿಯೇ ಇರಬೇಕೆಂದು ಹೇಳಿ ಅಂದಿನ ಜೀವನಕ್ಕೆ ವಿಲಾಸಿಗಳಾರಾದರೂ ದೊರೆಯುವರೇನೋ ಎಂದು ಪರಿಚಿತ ಸ್ಥಳಕ್ಕೆ ಹೋದಳು. ದೈವಾನುಕೂಲದಿಂದ ಎಂದಿಗಿಂತಲೂ ಅವಳಿಗೆ ಹೆಚ್ಚಿನ ಹಣ ದೊರೆಯಿತು. ಅದರ ನೆರವಿನಿಂದ ತನ್ನಲ್ಲಿ ಪಾಲನೆಗಾಗಿ ಬಂದಿದ್ದ ಬಾಲಕನನ್ನು ಸಂತೈಸಿದಳು.

ಆದರೆ ಒಂದು ದಿನ ಇದೇ ಬಗೆಯಾಗಿ ಬೀದಿಯಲ್ಲಿ ವಿಲಾಸಿಗಳನ್ನು ಆಕರ್ಷಿಸುವ ಕೆಲಸದಲ್ಲಿರಲು ಬಹು ಹೊತ್ತಾದುದರಿಂದ ಪೋಲೀಸರಿಂದ ಹಿಡಿಯಲ್ಪಟ್ಟು ಅವಳು ಸೆರೆಮನೆ ಸೇರಬೇಕಾಯಿತು. ತಾಯಿಯಂತೆ

ಸಂತೈಸಿ, ಪೋಷಿಸುತ್ತ ಬಂದ ಆ ಬಾಲಕನನ್ನು ಪಾಲಿಸಬೇಕೆಂದು ಹಂಬಲಿಸು ತ್ತಿದ್ದ ಅವಳ ತಾಯ್ತನದ ಆಶೆಗೆ ಕಲ್ಲು ಬಿತ್ತು ಸೆರೆಮನೆ ಸೇರುವಾಗ ಅವಳಿಗಾದ ವ್ಯಥೆ ಇಂತಹ ಸನ್ನಿವೇಶಗಳ ಅನುಭವವುಳ್ಳವರಿಗೆ ವಿದಿತ

ಮಾರನೆಯ ದಿನ ಬೆಳಗಾದ ಕೂಡಲೇ ಆ ಕೋಣೆಯ ಯಜಮಾನ ಬಂದು, ಫ್ಯಾನೀಯು ಜೇಲಿನಲ್ಲಿರುವಳೆಂದು ಹೇಳಿ, ಅವನನ್ನು ಮನೆಯಿಂದ ಹೊರಗೆಹಾಕಿದನು ಅವಳಂದು ಸಂಜೆ ಇತ್ತ ಹನ್ನೆರಡು ಪ್ರಾಂಕುಗಳಿಂದ ಎಳೆ ವಯಸ್ಸಿನಲ್ಲಿ ಜೀವನದ ಮಾರ್ಗ ಕಾಣದೆ ಮತ್ತೆ ಪ್ಯಾರಿಸ ನಗರದಲ್ಲಿ ಅಲೆಯಬೇಕಾಯಿತು

× × × ×

ಹದಿನೈದು ವರುಷಗಳ ನಂತರ ಒಂದು ದಿನ ಪ್ಯಾರಿಸದ ದಿನ ಪತ್ರಿಕೆ ಗಳಲ್ಲಿ ದೊಡ್ಡ ಅಕ್ಷರಗಳಲ್ಲಿ ಫ್ಯಾನೀ ಕ್ಲಾರೀಯೆಟು (Fanny Clarriot) ಎಂಬ ನರ್ತಕಿಯು ಪಾರ್ಶ್ವವಾಯುವಿನಿಂದ ನರಳುತ್ತಿರುವಳೆಂದು ಪ್ರಕಟ ವಾಗಿತ್ತು. ಪತ್ರಿಕಾಕರ್ತರು ಅವಳ ಬಗ್ಗೆ ಬಹು ಶ್ಲಾಘನೀಯ ಲೇಖನಗಳನ್ನು ಬರೆದಿದ್ದರು ನರ್ತನದಲ್ಲಿ ಹೆಸರುಗಳಿಸಿ, ಅನೇಕ ಶ್ರೀಮಂತರನ್ನ ಮರುಳು ಗೊಳಿಸಿ, ರಾಜಮಹಾರಾಜನ್ನು ತನ್ನ ಪಾದಾಕ್ರಾಂತರಾಗುವಂತೆ ಮಾಡಿದ ಆ ನೃತ್ಯರಾಣಿಯ ಬಗ್ಗೆ ಬರೆದ ಬಹು ಸ್ತುತ್ಯಪರ ಅಗ್ರಲೇಖನಗಳನ್ನು ಫ್ರಾನ್ಸ ದೇಶದಲ್ಲಿ ಚಿತ್ರಗಾರನೆಂದು ಹೆಸರು ಗಳಿಸಿದ ಫ್ರಾನ್ಸಿಸ್ ಗೋರ್‌ಲೆಂಡನು ನೋಡಿ ಆಶ್ಚರ್ಯಚಕಿತನಾದ ಹದಿನೈದು ವರುಷಗಳ ಹಿಂದೆ ಚಳಿಯ ರಾತ್ರಿ ಯಲ್ಲಿ ಸ್ವಲ್ಪ ದಿನ ತನ್ನನ್ನು ಸಾವಿನ ಬಾಯಿಂದ ತಪ್ಪಿಸಿ ತನ್ನ ಪೋಷಣೆ ಗೆಂದು ಜೇಲನ್ನು ಸೇರಿದ ಫ್ಯಾನೀಯೇ ಇವಳಾಗಿರಬಹುದೆಂದು ಆತನು ಯೋಚಿಸಿದ ಸಂಪಾದಕರ ಸಂತಾಪಸೂಚಕ ಮಾತುಗಳು ಅವನನ್ನು ಬಹು ನೋಯಿಸಿದವು "ಅಂತೂ ಶ್ರೀಮಂತಿಕೆಯಲ್ಲಿ ಸುಖಿಸಿದ ಜೀವವಿಂದು ಸಾಲದಲ್ಲಿ ಮುಳುಗಿ ಬೇನೆಗೆ ಆರೈಕೆ ಇಲ್ಲದೆ ಮಡಿಯಬೇಕೆ? ಕಲೆಗಾಗಿ ದುಡಿದ ಜೀವಿಗಳಿಗೆ ಕಲೋಪಾಸಕರಿಂದ ಇದು ತಾನೆ ನೆರವು? ನಾಡು ಇಂತಹ ಕಲಾಜೀವಿಗಳನ್ನು ಮರೆಯಬಾರದು" ಮುಂತಾಗಿ ಬರೆದ ಸಂಪಾದಕರ ಸವಾಲಿನ ವಾಕ್ಯಗಳು ಇವನನ್ನು ಕೆಣ್ಣೆರೆಯುವಂತೆ ಮಾಡಿದವು ಅನೀರಿಕ್ಷಿತವಾಗಿ ಅವನ ಕಣ್ಣಲ್ಲಿ ನೀರು ತುಂಬಿ ದೃಷ್ಟಿ ಮಂದವಾಯಿತು "ಇಲ್ಲ, ಇಲ್ಲ ನನ್ನ ತಾಯಿ ಫ್ಯಾನೀ ಎಂದಿಗೂ ವೈದ್ಯರಿಂದ ಪೋಷಣೆ

ಇಲ್ಲದೆ ಸಾಯಲಾರಳು'' ಎಂದು ಮನದಲ್ಲಿಯೇ ನಿರ್ಧರಿಸಿದ. ಈ ಅವಸ್ಥೆಗೆ ಬರುವುದರ ಮುನ್ನ ಅವಳನ್ನು ಅನೇಕ ಸಲ ನೃತ್ಯ ಗೃಹಗಳಲ್ಲಿ, ಅನೇಕ ಬಹಿರಂಗ ಪ್ರದೇಶಗಳಲ್ಲಿ, ವಿಲಾಸಿಗಳ ಸಂತೋಷ ಕೂಟಗಳಲ್ಲಿ, ಇತರ ಸ್ಥಳಗಳಲ್ಲಿ ಕಂಡು ಅವಳಾರಂಬುವುದನ್ನು ದೂರದಿಂದಲೇ ಗುರುತಿಸಿದ್ದನು. ಒಳ್ಳೇ ಅಂತಸ್ತಿನಲ್ಲಿದ್ದ ಶ್ರೀಮಂತಿಕೆಯಲ್ಲಿ ಮೆರೆಯುತ್ತಿರುವ ಅವಳನ್ನು ಮಾತನಾಡಿಸಿದರೆ ಗುರುತಿಸುವಳೋ ಇಲ್ಲವೋ ಎಂಬ ಸಂಶಯ ಅವಳನ್ನು ದೂರದಿಂದಲೇ ನೋಡಿ ಸಂತೋಷಿಸುವಂತೆ ಮಾಡಿತ್ತು ಅವಳ ಬಗ್ಗೆ ಹೆಚ್ಚಿನ ವಿವರಗಳನ್ನು ವಿಚಾರಿಸಿ ಸಮಾಧಾನ ಹೊಂದಿದ್ದ ಅವಳ ಸಕಾಲದ ಮಹತ್ವದ ನೆರವಿನಿಂದ ತಾನು ಇಂತಹ ಸ್ಥಿತಿಗೆ ಬಂದು, ತಾನೊಬ್ಬ ಮನುಷ್ಯನಾಗಿ, ಗೃಹಸ್ಥನಂತೆ ಜೀವಿಸಲು ಕಾರಣಳಾದ ಅವಳಿಗೆ ಈಗ ತಪ್ಪದಲೇ ಸಹಾಯ ಮಾಡುವುದು ಮಾನವತೆಯ ಲಕ್ಷಣವೆಂದೂ, ಕೃತಜ್ಞತೆಯ ಕುರುಹೆಂದು ನೆನೆದನು ಒಂದು ಕಾಲದಲ್ಲಿ ಸಮಸ್ತ ಪ್ಯಾರಿಸ ನಗರವನ್ನೇ ತನ್ನ ಮೋಹಜಾಲದಲ್ಲಿ ಕೆಡವಿ, ಶ್ರೀಮಂತಿಕೆಯನ್ನು ಅನುಭವಿಸಿ, ವೈಭವದಿಂದ ಮೆರೆದ, ಅವಳಿಗೆ ಇಂತಹ ದುರಾವಸ್ಥೆ ಬಂದಿರುವಾಗ ಸಹಾಯ ಮಾಡುವುದು ತನ್ನ ಕರ್ತವ್ಯವೆಂದು ನಿಶ್ಚಯಿಸಿದ

ತನ್ನ ವೃತ್ತಿಯಿಂದ ಗಳಿಸಿದ ಹಣವು ಸಾಕಷ್ಟಿತ್ತು ಆಗಲೇ ಉತ್ತಮ ಚಿತ್ರಗಾರನೆಂಬ ಹೆಸರು ಗಳಿಸಿರುವುದರಿಂದ, ತನ್ನ ಸ್ಥಿತಿ ಮುಂದೆ ಹೆಚ್ಚು ಅಭಿವೃದ್ಧಿಯಾಗುವ ಸಂಭವವಿತ್ತು. ಅವಳನ್ನು ಸಾಕುತಾಯಿಯೆಂಬ ಭಾವನೆಯಿಂದ ಗೌರವಿಸಿದ ಆ ವ್ಯಾಧಿಗ್ರಸ್ಥಳಾದ ಫ್ಯಾನೀಯನ್ನು ಹೆಸರಾದ ಚಿಕಿತ್ಸಾಲಯಕ್ಕೆ ಕರೆದುಕೊಂಡು ಹೋಗಿ ಒಳ್ಳೆಯ ವೈದ್ಯರಿಂದ ಆರೈಕೆ ದೊರೆಯುವಂತೆ ಮಾಡಿದ ಆದರೆ ಅರ್ಧಾಂಗವಾಯುವಿಗೆ ಬಲಿಯಾದ ಯಾವ ಮಾನವನೂ ಪೂರ್ಣ ಗುಣಹೊಂದಲಾರನೆಂದು ಅವನಿಗೆ ತಿಳಿದಿತ್ತು ಸ್ವಲ್ಪ ಕಡಮೆಯಾದಂತೆನಿಸಿ ಮತ್ತೆ ದ್ವಿಗುಣಿತವಾದ ಸತ್ವದಿಂದ ರೋಗಿಯನ್ನು ಪೀಡಿಸುವುದು ಈ ವ್ಯಾಧಿಯ ಲಕ್ಷಣವೆಂದೂ ಅರಿತಿದ್ದನು ಅಂತಹ ಅವಸ್ಥೆ ಇವಳಿಗೆ ಬಾರದಿರಲೆಂದು ದೇವರನ್ನು ಬೇಡಿದ

ಒಂದೆರಡು ತಿಂಗಳ ಆರೈಕೆಯಿಂದ ಅವಳಿಗೆ ಸ್ವಲ್ಪ ಗುಣವಾದಂತೆ ಕಂಡುಬಂತು. ಡಾಕ್ಟರುಗಳು ಆಕೆಯನ್ನು ವಿಶ್ರಾಂತಿಗಾಗಿ ಬೇರೊಂದು

ಕಡೆಗೆ ಕರೆದುಕೊಂಡು ಹೋಗಬಹುದೆಂದು ಸೂಚಿಸಿದರು ಆ ಬೇನೆ ಯಾವ ಸಮಯದಲ್ಲಿ ಪುನಹ ಕಾಣಿಸಿಕೊಳ್ಳುವುದೆಂಬುದನ್ನು ಹೇಳಲಾಗದೆಂದೂ, ರೋಗಿಯ ಆರೈಕೆಯಲ್ಲಿ ಯಾವ ಬಗೆಯ ಕೊರತೆ ಇರಬಾರದೆಂದೂ ಹೇಳಿದರು. ಇದಲ್ಲದೆ ಅವಳ ಹೃದಯ ವಿಕಾರಗೊಳ್ಳುವ ಭಯಾನಕ ಸನ್ನಿವೇಶಗಳಿಂದ ಅವಳು ದೂರ ಇರುವಂತೆ ನೋಡಿಕೊಳ್ಳಬೇಕೆಂದು ಎಚ್ಚರಿಸಿದರು

ಅವರ ಸೂಚನೆಯಂತೆ ಶ್ರೀಮಂತರ ಮನೆಗಳಲ್ಲಿ ಸಿಗುವ ಅನುಕೂಲತೆಗಳಿಗೆ ಕಡಿಮೆಯಾಗದಂತೆ ಎಲ್ಲ ಏರ್ಪಾಡುಗಳನ್ನೂ ಮಾಡಿದ. ಅವಳೊಂದಿಗೆ ತಾನೂ ಇರಹತ್ತಿದ ತಾನಾರೆಂಬ ವಿಷಯ ಮಾತ್ರ ಅವಳಿಗೆ ತಿಳಿಸಲಿಲ್ಲ ಯಾವನೋ ಓರ್ವ ಶ್ರೀಮಂತ ಯುವಕ ತನ್ನನ್ನು ಆರೈಸುತ್ತಿರುವನೆಂದು ಮಾತ್ರ ತಿಳಿದಿದ್ದಳು ಅಂದು ಡಿಸೆಂಬರ ತಿಂಗಳ ಚಳಿರಾತ್ರಿಯಲ್ಲಿ ಆಶ್ರಯವಿತ್ತ ನಿರಾಶ್ರಿತ ಬಾಲಕನೇ ಇವನೆಂದು ಅವಳಿಗೆ ತಿಳಿದಿರಲಿಲ್ಲ ಹದಿನೈದು ದಿನಗಳಲ್ಲಿ ಮತ್ತೆ ಆ ಬೇನೆ ಉಗ್ರರೂಪದಲ್ಲಿ ಕಾಣಿಸಿಕೊಂಡಿತು

ಅಂದು ಅವಳು ಅಮಿತ ಹುಚ್ಚು ಹಿಡಿದವಳಂತೆ ಆರ್ಭಟಿಸತೊಡಗಿದಳು ಕಡೆಯ ದಿನ ಆ ಯುವಕನನ್ನು ತನ್ನ ಆಲಿಂಗನದ ಹಿಡಿತದಲ್ಲಿ ಸಿಗುವಂತೆ ಮಾಡಿ ಮುದ್ದಿನ ಸುರಿಮಳೆ ಸುರಿಸುತ್ತಲೇ ಮಡಿದಳು

× × × ×

ಅಂದು ಚಿತ್ರಕಲಾ ಪ್ರದರ್ಶನ ಮಹೋತ್ಸವ ನಡೆದಿದೆ ಫ್ರಾನ್ಸಿಸ್ ಗೋರಲಾಂಡನು ಬರೆದ ಹುಚ್ಚಿಯ ಚಿತ್ರವನ್ನು ಎಲ್ಲರೂ ಹೊಗಳುವವರೆ. ಅದಕ್ಕೆ ಪ್ರಥಮ ಬಹುಮಾನ ದೊರೆತಿತ್ತು

ಇವನನ್ನು ಸತ್ಕರಿಸಿಲು ಏರ್ಪಡಿಸಿದ ಊಟದ ಸಮಾರಂಭದಲ್ಲಿ ಇವನ ಕಿವಿಗೆ ಬಿದ್ದ ಒಂದೆರಡು ಮಾತುಗಳು ಅವನನ್ನು ನೋಯಿಸಿದವು. ಮಿತ್ರರಾದ ಕಲಾವಿದರು ತಾನು ಫ್ಯಾನೀಗೆ ತೋರದ ಆರೈಕೆಯ ಬಗ್ಗೆ ತಪ್ಪು ಕಲ್ಪನೆಯ ಆರೋಪದ ಮಾತುಗಳು ಇವನ ಹೃದಯವನ್ನು ಕಲಕಿದವು ಆದರೆ ಅಂತಹ ತಪ್ಪನ್ನು ತಾನು ಮಾಡಿರಲಿಲ್ಲವಾದುದರಿಂದ, ಧೈರ್ಯದಿಂದ ಫ್ಯಾನೀಯ ಎಲ್ಲ ವಿವರಗಳನ್ನು ಸಾಂಗವಾಗಿ ವಿವರಿಸಿದ ಅಲ್ಲಿ ನೆರೆದ ಇತರ ಕಲಾವಿದರು ಅವನ ಕತೆ ಕೇಳಿ, ವಿಶ್ವಾಸ ತೋರಿ, ಅವನ ಕೃತಜ್ಞತೆಗೆ ಅಭಿನಂದಿಸಿದರು.

—The Debt

---

# ಕೊಲೆಯ ಸೇಡು

ಸಾರ್ಡಿನಿಯಾ ಪ್ರಾಂತದ ಕಡಲ ತೀರದಲ್ಲಿ ನಿರ್ಮಿತವಾದ ಪರ್ವತ ಶ್ರೇಣಿಗಳ ಪದರಿನಲ್ಲಿ ಬೋನಿಫಾಷಿಯೋ ಎಂಬ ನಗರವಿತ್ತು. ಈ ಊರು ಸಮುದ್ರ ತೀರಕ್ಕೆ ಬಹಳ ಎತ್ತರವೇನೂ ಇರಲಿಲ್ಲ ಎತ್ತರವಾದ ದಿನ್ನೆಯಲ್ಲಿ ಬೆಳೆದುನಿಂತ ಆ ಊರು ಸಣ್ಣದಾದರೂ ಅಲ್ಲಿಯ ಬೀದಿಗಳು ನಿಚ್ಚಣಿಕೆಯ ಮೆಟ್ಟಲುಗಳಂತೆ ಮೇಲಿನಿಂದ ಕೆಳಗಿನ ಸಮುದ್ರತೀರದವರೆಗೂ ಹರಡಿ ಕೊಂಡಿದ್ದವು ಬೆಳ್ಳಗೆ ಶೋಭಿಸುವ ಆ ಮನೆಗಳು ಮೇಲಿನಿಂದಾಗಲಿ, ದೂರ ದಿಂದಾಗಲಿ ನೋಡುವವರಿಗೆ ಹಸಿರು ಗಿಡಗಳ ನಡುವೆ ನಿರ್ಮಿತವಾದ ಪಕ್ಷಿಗಳ ಗೂಡುಗಳಂತೆ ಕಣ್ಣಿಗಾನಂದವನ್ನುಂಟು ಮಾಡುತ್ತಿದ್ದವು. ವಿಧವೆಯಾದ ಪವಲೋವಾಳ ಮನೆ ಕೊನೆಯ ಪದರಿನಲ್ಲಿ ಸಮುದ್ರದ ಅಂಚಿನಲ್ಲಿ ನಿರ್ಮಿತವಾದುದರಿಂದ ಅವಳು ತನ್ನ ಮನೆಯ ಕಿಟಕಿಗಳಿಂದ ಎದುರಿಗಿದ್ದ ಸಮುದ್ರ ಪ್ರದೇಶವನ್ನೂ, ಪಕ್ಕದಲ್ಲಿ ಹರಡಿಕೊಂಡಿದ್ದ ವಿಸ್ತಾರ ವಾದ ಭೂಭಾಗವನ್ನೂ ನೋಡಿ ಆನಂದಿಸಲು ಅವಳಿಗೆ ಅನುಕೂಲವಿತ್ತು ಅವಳ ಬಂಧುಗಳೆಂದರೆ ಬೆಳೆದು ನಿಂತ ಮಗ, ಅಂಟೋನಿ ಮತ್ತು ಬಹು ಕ್ರೂರ ಜಾತಿಯ ಹೆಣ್ಣುನಾಯಿ ಪ್ರೀಸ್ಕೀ (Prisky). ಅಂಟೋನಿ ಇದನ್ನು ಬೇಟೆಗೆ ಉಪಯೋಗಿಸುತ್ತಿದ್ದನು

ಒಂದು ದಿನ ಭಿನ್ನಾಭಿಪ್ರಾಯದ ವಾದದಲ್ಲಿ ಮೊದಲಾದ ಜಗಳವು ದ್ವೇಷದಲ್ಲಿ ಕೊನೆಗೊಂಡು ಶತ್ರುವಾದ ನಿಕೋಲೆಸ್ ರಾವೋಲಾಟಿಯು ಮೋಸದಿಂದ ಅಂಟೋನಿಯನ್ನು ಚೂರಿಯಿಂದ ತಿವಿದು ಕೊಂದುಬಿಟ್ಟನು.

ಅವನ ಮೃತ ಕಳೇಬರವನ್ನು ಮಿತ್ರರು ಅವನ ಮನೆಗೆ ತಂದಿರಿಸಲು ಹೌಹಾರಿ ನಿಂತ ಆ ಮುದುಕಿ ತನ್ನ ಮಗನ ಶವವನ್ನು ಎವೆ ಇಕ್ಕದೇ ನೋಡುತ್ತ ನಿಂತಳು; ಕಣ್ಣೀರಿಡಲಿಲ್ಲ. ಮನದಲ್ಲಿಯೇ ಯೋಚಿಸಿ ಒಂದು ನಿಶ್ಚಯಕ್ಕೆ ಬಂದು ನೆರೆದಿದ್ದವರನ್ನು ದಯವಿಟ್ಟು ಹೋಗಂದು ಕೇಳಿ ಕೊಂಡಳು.

ಆ ಶವವನ್ನು ಮಂಚದ ಮೇಲಿರಿಸಿ ಜನರು ತಮ್ಮ ಮನೆಗಳಿಗೆ

ಸರಿದರು. ತನ್ನ ಯಜಮಾನನನ್ನು ಪ್ರೀತಿಸಿದ ನಾಯಿ ಆ ಶವದ ಹತ್ತಿರವೇ ಕಾದು ನಿಂತಿತ್ತು. ಯಾರನ್ನೂ ಹತ್ತಿರ ಬರಗೊಡಲಿಲ್ಲ

ಏಕಾಂತದಲ್ಲಿ ಆ ಮುದುಕಿ ಸಾಕಷ್ಟು ಅತ್ತಳು ಅವನನ್ನು ಸಮೀಪಿಸಿ ರಕ್ತಸ್ಥಿತವಾದ ಮುಖವನ್ನು ತನ್ನ ಕಣ್ಣೀರಿನಿಂದ ತೊಳೆದಳು. ಚೂರಿಯಿಂದ ಗಾಯಗೊಂಡ ಎಲ್ಲ ಭಾಗವನ್ನು ಮುಟ್ಟಿ ನೋಡಿದಂತೆಲ್ಲ ಅವಳ ರೋಗ ಇಮ್ಮಡಿಯಾಯಿತು ಹುಚ್ಚಳಂತೆ ಅವನ ಶರೀರದಲ್ಲಿ ಉಸಿರಾಡುವುದೇನೋ ಎಂದು ಎದೆಯ ಮೇಲೆ ತಲೆಯಿಟ್ಟು ನೋಡಿದಳು ಅವನ ಗಲ್ಲಗಳನ್ನು ಸವರುತ್ತ ತೆರೆದುನಿಂತ ರಕ್ತ ವಿಹೀನವಾದ ಅವನ ತುಟಿಗಳನ್ನು ಅಮಿತ ಪ್ರೀತಿಯಿಂದ ಚುಂಬಿಸಿದಳು ನಿರ್ವಾಹವಿಲ್ಲದೆ ಮೇಲಕ್ಕೇಳುತ್ತ ಮೆಲ್ಲನೆ "ಮಗೂ ಚಿಂತಿಸಬೇಡ ನಿನ್ನ ಆತ್ಮಕ್ಕೆ ಶಾಂತಿತರುವ ಕೆಲಸ ನಾನು ಮಾಡಿಯೇ ತೀರುವೆ ನಿನ್ನ ವೈರಿಯ ಮೇಲೆ ಸೇಡನ್ನು ತೀರಿಸಿಕೊಳ್ಳುವೆ ಮಗು, ಇದು ನನ್ನ ನಿಶ್ಚಯದ ನಿರ್ಧಾರ ನಿನ್ನ ತಾಯಿಯ ಮಾತು ಎಂದಿಗೂ ಸುಳ್ಳಾಗುವುದಿಲ್ಲ" ಎಂದು ನುಡಿಯುತ್ತ ಮತ್ತೆ ಅವನನ್ನು ಚುಂಬಿಸಿದಳು ಈ ದೃಶ್ಯವನ್ನು ನೋಡುತ್ತ ಆ ನಾಯಿಯು ತನ್ನ ನೆರವೂ ಅವಳ ಪ್ರತಿಜ್ಞೆಗೆ ಇದೆ ಏನೋ ಎಂಬಂತೆ ದೀರ್ಘ ಶ್ವಾಸವನ್ನು ಬಿಡುತ್ತ ಮೆಲ್ಲನೆ ಮರುಗಿತು. ರಾತ್ರಿಯೆಲ್ಲವೂ ಇವರಿಬ್ಬರೇ ಆ ಶವದ ಹತ್ತಿರ ಕಾವಲಿದ್ದರು. ಬೆಳಗಾದ ಮೇಲೆ ಅವನ ಶವದ ಸಮಾಧಿಯ ಕಾರ್ಯ ಮುಗಿಯಿತು.

ಅಂಟೋನಿಗೆ ಈ ಮುದುಕಿಯನ್ನು ಬಿಟ್ಟರೆ, ಅವನ ಶತ್ರುವಿನ ಮೇಲೆ ಸೇಡನ್ನು ತೀರಿಸಿಕೊಳ್ಳುವರಾರೂ ಇರಲಿಲ್ಲ. ಆ ಮುದುಕಿ ತನ್ನ ನಿಶ್ಚಯವನ್ನು ಮರೆಯಲಿಲ್ಲ.

ದಿನವೂ ಕಾಲುವೆಯ ಆಚೆದಂಡೆಯ ಕಡೆ ಅವಳ ನೋಟವು ಹೋಗುತ್ತಿತ್ತು. ಯಾವಾಗಲೂ ಕಿಟಕಿಯಲ್ಲಿ ಕುಳಿತು ಎದುರಿಗೆ ಆಚೆಯ ದಂಡೆಯಲ್ಲಿರುವ ಲಾಂಗಸಾರ್ಡೋ ಗ್ರಾಮದಲ್ಲಿರುವ ನಿಕೋಲಸನ ಮೇಲೆ ಸೇಡು ಹೇಗೆ ತೀರಿಸಿಕೊಳ್ಳುವ ಯೋಜನೆಯಲ್ಲಿಯೇ ದಿನ ಕಳೆಯುತ್ತಿದ್ದಳು. ತಾನು ಮುದುಕಿ. ಆತನನ್ನು ಎದುರಿಸುವ ಶಕ್ತಿ ಅವಳಲ್ಲಿರಲಿಲ್ಲ. ಆ ಹಳ್ಳಿಯ

ಕಾರ್ಶಿಕಾದೇಶದ ಕಳ್ಳಕಾಕರು ವಾಸಿಸುವ ಪ್ರಸಿದ್ಧ ಸ್ಥಳವಾಗಿತ್ತು ತನ್ನ ಮಗನನ್ನು ಕೊಂದು ಅವನು ಅಲ್ಲಿ ಸೇರುವನೆಂದು ಅವಳಿಗೆ ತಿಳಿದಿತ್ತು

ದಿನವೂ ಹೀಗೆ ಯೋಚನೆಯಲ್ಲಿರುವಾಗ ಅವಳ ನಾಯಿಯು ಕಾಲು ಹತ್ತಿರ ಮಲಗಿ ಇವಳ ದುಃಖದ ಯೋಚನೆಯಲ್ಲಿ ಪಾಲ್ಗೊಳ್ಳುವದೇನೋ ಎಂಬಂತೆ ಅವಳ ಕಡೆ ನೋಡುತ್ತ ಸುಮ್ಮನಿರುತ್ತಿತ್ತು ಕೆಲವೊಂದು ಸಮಯ ತನ್ನ ಯಜಮಾನನು ಬರುವನೋ ಎಂಬ ಆಶೆಯಿಂದ ನೋಡುತ್ತ ಬೊಗಳುತ್ತಿತ್ತು ಹೀಗೆ ಅದೂ ದಿನವೂ ತನ್ನ ದುಃಖದಲ್ಲಿ ಭಾಗವಹಿಸುತ್ತಿರುವಾಗ ಇದರ ನೆರವಿನಿಂದೇಕೆ ತನ್ನ ಕಾರ್ಯ ಸಾಧಿಸಬಾರದೆಂಬ ಯೋಚನೆ ಒಂದು ದಿನ ಅವಳಿಗೆ ಹೊಳೆಯಿತು ಬೆಳಗಾದ ಕೂಡಲೇ ಪ್ರಾರ್ಥನಾ ಮಂದಿರಕ್ಕೆ ಹೋಗಿ ದೇವರನ್ನು ತನ್ನ ಕಾರ್ಯದಲ್ಲಿ ಯಶಸ್ಸನ್ನು ದಯಪಾಲಿಸಲೆಂದು ಬೇಡಿಕೊಂಡು ಮನೆಗೆ ಬಂದವಳೇ ಮನೆಯಲ್ಲಿ ಬಿದ್ದಿದ್ದ ಕಬ್ಬಿಣದ ತುಂಡುಗಳನ್ನು ಬಯಲಿಗೆಳೆದು ಮುಂದಿನ ಆವಾರದಲ್ಲಿ ಅದನ್ನು ಗಟ್ಟಿಯಾಗಿ ಹೂಳಿದಳು ಆ ನಾಯಿಯನ್ನು ಅದಕ್ಕೆ ಸರಪಳಿಯಿಂದ ಬಿಗಿದು ಮನೆಯಲ್ಲಿಯೇ ಇದ್ದುಬಿಟ್ಟಳು ತನ್ನ ಯಜಮಾನಿ ಹೊರಗೆ ಬಾರದೇ ಇದ್ದುದಕ್ಕೆ ನಾಯಿಯು ಸುಮ್ಮನೇ ನೋಡುತ್ತ ರಾತ್ರಿ ಹಗಲು ಬೊಗಳಿ ಬೊಗಳಿ ಸುಮ್ಮನಾಯಿತು

ಮಾರನೆಯ ದಿನ ಬೆಳಗಾದ ಕೂಡಲೆ, ಒಂದು ಬಕೆಟ್ಟಿನ ತುಂಬ ನೀರನ್ನು ಮಾತ್ರ ಕುಡಿಯಲು ಆ ನಾಯಿಯ ಮುಂದಿಟ್ಟಳು ತಿನ್ನುವದಕ್ಕೇನೂ ಕೊಡಲಿಲ್ಲ.

ಹೀಗೆ ಮತ್ತೊಂದು ದಿನ ಕಳೆಯಿತು ಅದು ನಿತ್ರಾಣದಿಂದ ಉಪವಾಸವಿರಬೇಕಾಯಿತು. ಅದರ ಕಣ್ಣುಗಳು ಕೋಪ, ತಾಪದಿಂದ ಮಿನುಗ ತೊಡಗಿದವು ಬಂಧನದಿಂದ ಬಿಡುಗಡೆಯಾಗಬೇಕೆಂದು ಅದು ಹಾತೊರೆಯುತ್ತಿತ್ತು

ಆದರೂ ಅದಕ್ಕೆ ಯಾವ ಆಹಾರವೂ ಸಿಗಲಿಲ್ಲ. ಅಂದು ರಾತ್ರಿ ಮತ್ತೆ ಬೊಗಳುವುದರಲ್ಲಿಯೇ ಕಾಲಕಳೆಯಿತು. ಮಾರನೆಯ ದಿನ ಬೆಳಗಾದ ಕೂಡಲೆ ಆ ಮುದುಕಿ ನೆರೆಮನೆಯವರ ಸಹಾಯದಿಂದ ಒಂದು ಹುಲ್ಲಿನಿಂದ ಮನುಷ್ಯಾಕಾರದ ಒಂದು ಗೊಂಬೆಯನ್ನು ತಯಾರಿಸಿದಳು. ಅದಕ್ಕೆ ತನ್ನ

ಗಂಡನ ವೇಷ ಭೂಷಣಗಳನ್ನು ತೊಡಸಿದಳು. ಮುಖದಾಕಾರದ ಒಂದು ದುಂಡಾದ ರಟ್ಟಿನ ತಲೆಯನ್ನೂ ನಿರ್ಮಾಣ ಮಾಡಿ, ಮನುಷ್ಯನಂತೆ ಕಾಣುವ ಆ ಗೊಂಬೆಯುನ್ನು ದೂರದಲ್ಲಿ ಕೆಳಗೆ ಬೀಳದಂತೆ ನಿಲ್ಲಿಸಿ ಹಿಂದೆ ಹಗ್ಗದಿಂದ ಬಿಗಿದಳು

ಆ ಗೊಂಬೆ ನಿಂತಿರುವದನ್ನು ನೋಡಿ ನಾಯಿ ಹಸಿವೆಯಿಂದ ಸಂಕಟ ವಾಗಿದ್ದರೂ ಒದರತೊಡಗಿತು. ಜಿಗಿದು ಅವನನ್ನು ಹೊಡೆದೋಡಿಸಬೇಕೆಂದು ಹವಣಿಸತೊಡಗಿತು ಕೊಂಚಮಾಂಸವನ್ನುತಂದು ನಾಯಿಯ ಎದುರಿನಲ್ಲೇ ಅದನ್ನು ಬೇಯಿಸತೊಡಗಿದಳು. ನಾಯಿಗೆ ತಡೆಯಲಾರದಷ್ಟು ರೋಷ ಬಂದಿತು ಕುದಿಯುವ ಆ ಮಾಂಸದ ವಾಸನೆಯಿಂದ ಅದರ ಪಿತ್ತ ತಲೆ ಗೇರಿತು ಹಸಿವಿನಿಂದ ಅದು ಸಂಕಟಪಡುತ್ತಿತ್ತು

ಆ ಬೇಯಿಸಿದ ಮಾಂಸದ ತುಂಡಿನಿಂದ ಒಂದು ಕೆಂಪು ಕೊರಳು ಪಟ್ಟಿ ಯನ್ನು ತಯಾರಿಸಿ ಆ ಗೊಂಬೆಯ ಕೊರಳಿಗೆ ಅದನ್ನು ಸುತ್ತಿದಳು ಇದೆಲ್ಲ ವನ್ನೂ ನಾಯಿ ಅತಿ ತಾಪದಿಂದ ನೋಡುತ್ತಿತ್ತು ಆ ಹುಲ್ಲಿನಿಂದ ತಯಾರಿ ಸಿದ ಆ ಗೊಂಬೆಯನ್ನು ತೋರಿಸುತ್ತ “ ಅವನನ್ನು ನೋಡಿಕೋ ” ಎಂಬ ಮಾತುಗಳಿಂದ ಅದನ್ನು ಬಂಧನದಿಂದ ಬಿಡುಗಡೆ ಮಾಡಿದಳು.

ಅದು ಒಂದೇ ಜಿಗಿತಕ್ಕೆ ಆ ಮಾಂಸದ ತುಂಡನ್ನು ತನ್ನ ಹಲ್ಲುಗಳಿಂದ ಕಡಿಯುತ್ತ, ಜಿಗಿಯುತ್ತ ಮಾಂಸದ ತುಣುಕುಗಳು ನೆಲಕ್ಕೆ ಬಿದ್ದಂತೆಲ್ಲ ಅದನ್ನು ರಭಸದಿಂದ ನುಂಗುತ್ತ, ಆ ಗೊಂಬೆಯ ಕುತ್ತಿಗೆಯನ್ನು ಸೀಳಿ ಎಲ್ಲ ಮಾಂಸವನ್ನೂ ತಿಂದು ಬಿಟ್ಟಿತು

ನಾಯಿಯ ಈ ವರ್ತನೆಯನ್ನು ಸುಮ್ಮನೇ ನೋಡುತ್ತ, ಈ ವಿಧಾನ ದಲ್ಲಿ ತನ್ನ ಕೆಲಸ ಸಾಧಿಸಬಹುದೆಂಬ ಆಶೆ ಅವಳಲ್ಲಿ ತಲೆದೋರಿತು ಮತ್ತೆರಡು ದಿನ ಆ ನಾಯಿಯನ್ನು ಉಪವಾಸವಿರುವಂತೆ ಮಾಡಿ ಮೂರನೆಯ ದಿನ ಮೇಲೆ ಹೇಳಿದ ವಿಧಾನದಂತೆ ಅದಕ್ಕೆ ಆಹಾರ ಸಿಗುವಂತೆ ಮಾಡಿದಳು

ಈ ಬಗೆಯಾಗಿ ಈ ನಾಯಿಗೆ ಮೂರು ತಿಂಗಳ ಕಾಲ ಸರಿಯಾದ ರೀತಿಯಲ್ಲಿ ಅಭ್ಯಾಸ ಕೊಟ್ಟನಂತರ ಪವಲೋವಾಳಿಗೆ ಸಮಾಧಾನವಾ ಯಿತು ಈ ಹೊತ್ತಿಗೆ ಆಹಾರವನ್ನು ಹಲ್ಲಿನಿಂದಲೇ ಜಿಗಿಯುವ ಪದ್ಧತಿ

ಯನ್ನು ಅದು ಕಲಿತಿದ್ದಿತು ಯಾವ ಪದಾರ್ಥವನ್ನು ತಂದಿರಿಸಿದರೂ ಹಲ್ಲಿನಿಂದ ಜಗಿದು ತಿನ್ನುವ ರೂಢಿ ಅದಕ್ಕೆ ರುಚಿಸುತ್ತಿತ್ತು. ಆ ಮೂಕ ಗೊಂಬೆಯ ಕಡೆ ತೋರಿಸಿದ ಕೂಡಲೇ ಅದು ಒಂದೇ ಪೆಟ್ಟಿಗೆ ಅದರ ಕತ್ತನ್ನು ಹಿಡಿದು ಜಗಿಯುವುದೊಂದೇ ಅದಕ್ಕೆ ತಿಳಿದಿತ್ತು ಮೇಲೆ "ಅವನನ್ನು ನೋಡಿಕೋ" ಎಂದು ಹೇಳಿದರಂತೂ ಅದರ ಉತ್ಸಾಹ ಇಮ್ಮಡಿಯಾಗುತ್ತಿತು

ತನ್ನ ನಾಯಿಯು ಕಾರ್ಯ ಸಾಧಿಸಬಲ್ಲದೆಂಬ ಧೈರ್ಯ ಬಂದ ನಂತರ ಒಂದು ದಿನ ಎದ್ದವಳೇ ಮೈ ಶುಚಿಮಾಡಿಕೊಂಡು ಪ್ರಾರ್ಥನಾಲಯಕ್ಕೆ ಹೋಗಿ ದೇವರಿಗೆ ಅನಂತ ಪ್ರಣಾಮಗಳನ್ನು ಸಲ್ಲಿಸಿ ಎಲ್ಲ ಸಿದ್ಧತೆಯನ್ನು ಮಾಡಿಕೊಂಡು, ಇತರರಾರಿಗೂ ತನ್ನ ಪರಿಚಯ ತಿಳಿಯಬಾರದೆಂದು ಭಿಕ್ಷುಕಿಯಂತೆ ವೇಷ ಬದಲಾಯಿಸಿಕೊಂಡು ನಾವಿಕನೊಂದಿಗೆ ಆ ಕಡೆಯ ದಂಡೆ ಸೇರಿದಳು ನಾಯಿಗೆ ಹಿಂದಿನ ಎರಡು ದಿನಗಳಿಂದ ಯಾವ ಆಹಾರವನ್ನೂ ಕೊಟ್ಟಿರಲಿಲ್ಲ. ಸಿಕ್ಕವರ ಮೇಲೆ ಹಾರಬಾರದೆಂದು ಸರಪಳಿಯಿಂದ ಅದನ್ನು ಬಿಗಿ ಹಿಡಿದಿದ್ದಳು

ಅಲ್ಲಿಯ ರೊಟ್ಟಿ ಅಂಗಡಿಗೆ ಹೋಗಿ ನಿಕೋಲಸನಿರುವ ಸ್ಥಳವನ್ನು ಪತ್ತೆ ಹಚ್ಚಿದಳು. ಅಲ್ಲಿ ಅವನು ಮರದ ಅಂಗಡಿಯಲ್ಲಿ ಕೆಲಸಕ್ಕಿರುವನೆಂದು ತಿಳಿದಳು ಅಂಗಡಿಯ ಹಿಂದೆ ಅವನು ಕೆಲಸ ಮಾಡುತ್ತಿದ್ದುದನ್ನು ದೂರದಿಂದಲೇ ನೋಡಿ ಎತ್ತರದ ದನಿಯಲ್ಲಿ "ಲೊ, ನಿಕೊಲಸ್" ಎಂದು ಕೂಗಿದಳು, ಅವನು ಕೂತಲ್ಲಿಂದಲೇ ಹಿಂತಿರುಗಿ ನೋಡಿದ ತಕ್ಷಣವೇ ಸರಪಳಿಯ ಬಿಗಿತವನ್ನು ಸಡಿಲಿಸಿ "ಅವನನ್ನು ನೋಡಿಕೋ" ಎಂದು ತನ್ನ ನಾಯಿಗೆ ಸೂಚಿಸಿದಳು ಅದೇ ಅಜ್ಞೆಗಾಗಿ ಕಾದಿದ್ದ ಆ ನಾಯಿ ಅವನ ಕತ್ತಿನ ಮೇಲೆ ಹಾರಿ, ಕುತ್ತಿಗೆಯನ್ನು ಹಲ್ಲಿನಿಂದ ಬಿಗಿಯಾಗಿ ಹಿಡಿಯಿತು ಒಂದೇಸವನೆ ರಕ್ತ ಸುರಿಯತೊಡಗಿತು. ಆನಿರೀಕ್ಷಿತವಾಗಿ ಬಂದ ಈ ವಿಪತ್ತಿನಿಂದ ಪಾರಾಗಲು ಅವನು ಮಾಡಿದ ಪ್ರಯತ್ನವೆಲ್ಲವೂ ಫಲಕಾರಿಯಾಗಲಿಲ್ಲ ಮರುಕ್ಷಣದಲ್ಲಿ ಉಸುರುಗಟ್ಟಿ ಅವನು ನೆಲಕ್ಕುರುಳಿದ, ಪ್ರಾಣವಾಯುವು ಎಂದೋ ಹಾರಿ ಹೋಗಿದ್ದಿತು

ಅವಳು ಹಿಂತಿರುಗುವಾಗ, ಆ ಬಡಕಲಾದ ನಾಯಿ ಬ್ರೆಡ್ಡಿನ ತುಂಡನ್ನು ಹಲ್ಲಿನಿಂದ ಚೆಗಿಯುತ್ತ ತನ್ನ ಯಜಮಾನಳಾದ ಭಿಕ್ಷುಕಿಯೊಂದಿಗೆ ಬರುತ್ತಿದ್ದುದನ್ನು ಪಕ್ಕದ ಅಂಗಡಿಯವನು ನೋಡಿದನಂತೆ. ಆದರೆ ಆ ನಾಯಿ ಸ್ವಲ್ಪ ಸಮಯದ ಹಿಂದೆ ಮಾಡಿದ ಅಮಾನುಷ ಕೊಲೆಯ ಅರಿವು ಅವನಿಗಿರಲಿಲ್ಲ

ಅಂತೂ ಮಗನ ಕೊಲೆಯ ಸೇಡನ್ನು ಮುದುಕಿಯಾದರೂ ಈ ಬಗೆಯಾಗಿ ತೀರಿಸಿಕೊಂಡು ಮನೆಗೆ ಹಿಂತಿರುಗಿ ರಾತ್ರಿ ಯೋಚನೆ ಇಲ್ಲದೆ ಸುಖನಿದ್ರೆಯಿಂದ ಮಲಗಿದುದು, ಆಂಟೋನಿಯ ಸಾವಿನ ನಂತರ, ಅಂದೇಯೆಂದು ಹೇಳಬಹುದು.

—Vendetta

---

# ಆ ಕೊರಡು

ಅದೊಂದು ಸುಂದರ ಸಂಜೆ. ಅದೆ ತಾನೆ ಮಳೆ ಬಂದು ನಿಂತಿದೆ ಸ್ವಲ್ಪ ಚಳಿಮಾತ್ರ; ಮೈನಡುಗಿಸುತ್ತಿದೆ ಆದುದರಿಂದ ಅವರಿಬ್ಬರೂ ಹೊರಗೆ ತೋಟದಲ್ಲಿ ಹರಟೆಗೆ ಕೂಡದೇ ಮನೆಯ ದೊಡ್ಡ ಪಡಸಾಲೆಯಲ್ಲಿಯ ಅಗ್ಗಿಷ್ಟಿಕೆ (Hearth) ಯ ಹತ್ತಿರವೇ ಕುಳಿತಿದ್ದರು ಸುತ್ತಲೂ ಹೂಗಳ ಸುವಾಸನೆ ಅದೊಂದು ಬಗೆಯ ಆನಂದವನ್ನುಂಟು ಮಾಡಿದ್ದಿತು. ಆ ಭವನದಲ್ಲಿಯ ದೊಡ್ಡ ದೀಪ ತನ್ನ ಜ್ಯೋತಿಯನ್ನಾಗಲೇ ಹರಡಿದ್ದಿತು.· ಒಲೆಯಲ್ಲಿಯ ಬೆಂಕಿಯ ಝಳ ಅವರಿಗೆ ನಾಕಷ್ಟು ಸುಖವನ್ನು ಕೊಡುತ್ತಿತ್ತು

ಮನೆಯ ಯಜಮಾನಿ ವಯಸ್ಸಾದವಳು ಆದರೂ ಅವಳ ಚೆಲುವಿಕೆಗೆ ಯಾವ ಕುಂದೂ ಬಂದಿರಲಿಲ್ಲ ಅವಳ ಕೋಮಲ ಗಲ್ಲವು ನುಣುಪು ಕಾಗದದಷ್ಟು ನಯವಾಗಿತ್ತು.

ಆಕೆಯ ಹತ್ತಿರವೇ ಮತ್ತೊಂದು ಆಸನದಲ್ಲಿ ಅವಳ ಹಳೆಯ ಮಿತ್ರನೊಬ್ಬನು ಕುಳಿತಿದ್ದನು ಆತನಿನ್ನು ಅವಿವಾಹಿತ ಆಕೆಯೊಂದಿಗೆ ಸದಾ ಕಾಲವೂ ಸ್ನೇಹಿತನಂತೆ ಪ್ರಾಮಾಣಿಕತನದಿಂದ ನಡೆದುಕೊಂಡ ಆಪ್ತಮಿತ್ರರಲ್ಲಿ ಈತನು ಮುಖ್ಯನು. ಇಷ್ಟಾದರೂ ಆತನು ಅವಳ ಶರೀರ ಸುಖವನ್ನು ಬಯಸಿದವನಲ್ಲ ಅವನು ಒಳ್ಳೆಯ ನಡತೆಗೆ ಹೆಸರಾದವನು

ಒಂದು ಗಂಟೆಯ ವರೆವಿಗ ಅವರಿಬ್ಬರೂ ಒಂದೆಡೆ ಇದ್ದರೂ ಸುಮ್ಮನೇ ಕುಳಿತಿದ್ದರು ಮಾತನಾಡಲು ಯಾವ ವಿಷಯವೂ ಇರಲಿಲ್ಲವಾದುದರಿಂದ ಸುಮ್ಮನಿದ್ದಿರಬಹುದು. ಇದ್ದಕ್ಕಿದ್ದ ಹಾಗೆ, ಆ ಒಲೆಯಿಂದ ಉರಿಯುವ ಸಣ್ಣ ಕೊರಡು ಬೆಂಕಿಯ ಆವಾರದಿಂದ ಪುಟಿದೆದ್ದು ಹೊರಗೆ ಹಾಸಿದ ರತ್ನಗಂಬಳಿಯ ಮೇಲೆ ಬಿದ್ದು ಅದು ಸುಡುವುದನ್ನು ಕಂಡು ಅವಳ ಮಿತ್ರನು ಓಡಿಹೋಗಿ ಅದನ್ನು ಆರಿಸಿ ಮನೆಯ ಒಡತಿಗೆ ಒದಗದ ತಾತ್ಕಾಲಿಕ ಭಯವನ್ನಡಗಿಸಿದ

ಆದರೂ ಮನೆಯಲ್ಲೆಲ್ಲಾ ಒಂದು ಬಗೆಯ ಕೆಟ್ಟ ವಾಸನೆ ಹರಡಿದ್ದಿತು. ಮೂಗು ಮುರಿಯುತ್ತ ಇಬ್ಬರೂ ಎದುರು ಬದುರು ಕುಳಿತುಕೊಂಡಾಗ ಅವನು ಸ್ವಲ್ಪ ನಗುತ್ತ ಅವಳೊಂದಿಗೆ “ಈ ಸಂದರ್ಭದಲ್ಲಿ ನಾನು ಅವಿವಾ

ಹಿತನಾಗಿ ಉಳಿಯಬೇಕಾದುದಕ್ಕೆ ಕಾರಣವಾದ ಸನ್ನಿವೇಶದ ನೆನಪು ಬರುತ್ತಿದೆ" ಎಂದು ಹೇಳಿ ಸುಮ್ಮನಾದ

ಆಶ್ಚರ್ಯದಿಂದ ಅವಳು ಕಣ್ಣುಗಳನ್ನರಳಿಸುತ್ತ, ಅವನನ್ನು ಎವೆ ಇಕ್ಕದೇ ಕುತೂಹಲದಿಂದ ನೋಡುತ್ತ "ಅದು ಹೇಗೆ?" ಎಂದು ಕೇಳಿದಳು

"ಆ ಕತೆಯೆ? ಅದೊಂದು ವಿಷಾದಾಂತ, ದುಃಖಮಯ ಪ್ರಕರಣ ನನಗೂ ನನ್ನ ಪರಮ ಮಿತ್ರನಾದ ಜೂಲಿಯನ್ನನಿಗೂ ಹೇಗೆ ಮನಸ್ತಾಪ ಉಂಟಾಯಿತೆಂಬ ವಿಚಾರವನ್ನು ವಿವರಿಸುವ ಆ ನನ್ನ ಆತ್ಮಕತೆ ಬಹು ವಿಚಿತ್ರವಾದುದೇ. ನಮ್ಮೀರ್ವರಲ್ಲಿ ಬೆಳೆದ ಆ ಸ್ನೇಹ ಬಹಳ ಹತ್ತಿರದು. ಆದರೆ ಅಂತಹ ಸ್ನೇಹಕ್ಕೆ ಕುಂದು ಹೇಗೆ ಬಂದಿತೆಂಬುದು ವಿಸ್ಮಯದ ಮಾತು ನಿತ್ಯವೂ ಅಗಲದೇ ಒಂದೆಡೆ ಇರುತ್ತಿದ್ದ ನಾವು ಅಪರಿಚಿತರಂತೆ ವರ್ತಿಸುವದರ ಕಾರಣ ತಿಳಿಯಲು ನೀನು ಬಹಳ ಕುತೂಹಲಳಾಗಿರಬಹುದು ಈ ಕೆಳಗಿನ ವಿವರಗಳೇ ಈ ಸಮಸ್ಯೆಯನ್ನು ಪರಿಹರಿಸುವವು

"ನಾನು ಮತ್ತು ನನ್ನ ಮಿತ್ರ ಜೂಲಿಯನನು ಒಂದೆಡೆ ಇರುತ್ತಿದ್ದೆವು. ಒಂದರಗಳಿಗೆ ಸಹ ಅಗಲುತ್ತಿರಲಿಲ್ಲವೆಂದರ ಅತಿಶಯೋಕ್ತಿಯಾಗಲಾರದು. ನಮ್ಮಿಬ್ಬರನ್ನು ಒಂದುಗೂಡಿಸಿದ ಮಮತ ಎಂದಿಗೂ ನಮ್ಮನ್ನಗಲಿಸಲಾರದೆಂದು ನಮ್ಮೀರ್ವರ ಭಾವನೆಯಾಗಿತ್ತು.

"ಒಂದು ಸಂಜೆ ಮನೆಗೆ ಬಂದವನೇ ತಾನು ಮದುವೆಯಾಗಲು ನಿರ್ಧರಿಸಿರುವೆನೆಂದು ಅವನು ಬಹಳ ಉತ್ಸಾಹದಿಂದ ಹೇಳಿದ. ಅವನ ಆ ನಿರ್ಧಾರ ನನ್ನನ್ನು ಬೆರಗುಗೊಳಿಸಿತು ನಮ್ಮ ಪ್ರೀತಿಯ ಗೆಳೆತನದ ಜೀವನಕ್ಕೆ ಅದು ಕಂಟಕವಾಗಬಹುದೆಂದು ನಾನು ಹತಾಶನಾದ. ಅವನು ಮದುವೆಯಾದನೆಂದರೆ ಅವನ ಪ್ರೀತಿ, ವಿಶ್ವಾಸಗಳೆಲ್ಲವೂ ಸತಿಯ ಕಡೆ ಹೊರಳಿ ಅವಳೊಂದಿಗೆ ನಲಿಯುವುದು ಮಾನವಧರ್ಮದಂತೆ ನ್ಯಾಯುವಾದರೂ ನನ್ನಿಂದ ಅವನು ದೂರಾಗಿ, ನನಗೆ ಅವನು ದುಃಖವನ್ನು ತಂದೊಡ್ಡುವನೆಂದು ನಾನು ನೆನೆದೆ ಅವನ ಹೆಂಡತಿ ಬಂದಳೆಂದರೆ ನಮ್ಮಿಬ್ಬರ ನಡುವೆ ಪ್ರೀತಿ ವಿಶ್ವಾಸದ ಜೀವನ ಮುಂದರಿಯುವುದು ಅಸಂಭವ ಪರಸ್ಪರರಲ್ಲಿ ಇದುವರೆವಿಗೂ ನಡೆದ ಗೂಢ ವಿಚಾರಗಳು ರಹಸ್ಯವಾಗುಳಿಯುವುದು ಅವಶ್ಯ ಅಂತೂ ನಮ್ಮ ಗೆಳೆತನದ ಇಡಿಗಾಳಿನಂಥ ಜೀವನವು ಒಡೆಯುವ ಸಮಯ ಬಂದಿತೆಂದು ನನಗೆ ಬಹಳ

ದುಃಖವಾಯಿತು. ಅವನಿಂದ ನಾನು ದೂರಿರುವ ಸಮಯ ಬಂದಿತೆಂದು ದುಃಖಿಸಿದೆ. ಆದರೆ ಹೆಣ್ಣಿನ ಜತೆ ಬಯಸುವ ಇವನನ್ನು ತಡೆಯುವುದು ಒಳಿತಲ್ಲವೆಂದು ನಾನವನ ಮದುವೆಗೆ ನಿರ್ವಾಹವಿಲ್ಲದೆ ಸಮ್ಮತಿಯನ್ನಿತ್ತೆ

ಆದರೆ ಇನ್ನೊಂದು ವಿಷಯ; ಇಬ್ಬರು ಗಂಡಸರಲ್ಲಿರುವ ಸ್ನೇಹ ಮಮತೆಗಳ ಜತೆ ಬಾಳಿಗೂ ಗಂಡು ಹೆಣ್ಣಿನಲ್ಲಿ ಮೊದಲಿಗೆ ಮಿತ್ರತ್ವದಿಂದ ಆರಂಭವಾಗಿ ಮದುವೆಯಲ್ಲಿ ಕೊನೆಗೊಳ್ಳುವ ದಾಂಪತ್ಯದ ಜೀವನಕ್ಕೂ ತಾರತಮ್ಯವಿದೆ. ಮೊದಲಿನದರಲ್ಲಿ ಸರಿಸಮಾನತೆ, ಸಮದೃಷ್ಟಿ, ಇರುವುದು. ಇನ್ನೊಂದರಲ್ಲಿ ಈ ಸಮಾನತೆ ಇರುವದಿಲ್ಲ ಗಂಡಾಗಲಿ, ಹೆಣ್ಣಾಗಲಿ ಹೆಚ್ಚಿನ ಅಧಿಕಾರ ವಹಿಸಬೇಕಾಗುವುದು. ಅದು ದಾಂಪತ್ಯ ಜೀವನದ ರಹಸ್ಯನಿಯಮವೆಂದರೆ ತಪ್ಪಲ್ಲ. ಸೋತವ ಗೆದ್ದವನೂ ಆಗಬಹುದು ಗೆದ್ದವನು ಮತ್ತೆ ಸೋಲಲೂ ಬಹುದು. ದಂಪತಿಗಳ ಪ್ರೇಮವ್ಯವಹಾರದಲ್ಲಿ ಇದು ಸಹಜವೆ, ನಿಸರ್ಗದ ನಿಯಮವೇ. ಈ ತಾರತಮ್ಯವಿದುವುದರಿಂದಲೇ ಅನೇಕ ಯೋಗಿಗಳು, ತತ್ವಜ್ಞಾನಿಗಳು ಮದುವೆಯಾಗದೆ ಬ್ರಹ್ಮಚಾರಿಗಳಾಗಿ ಉಳಿದುದರ ಕಾರಣವಿರಬಹುದೆಂದು ನನ್ನ ಎಣಿಕೆ. ಗೃಹಸ್ಥರಾಗಿ ಮಕ್ಕಳನ್ನು ಹೆತ್ತರೆ ಅವರಲ್ಲಿ ಪ್ರೇಮ ಕಡಿಮೆಯಾಗಬಹುದೆಂದೂ, ಆ ಮಕ್ಕಳೇ ತಮ್ಮನ್ನು ಮುಪ್ಪಿನಲ್ಲಿ ದುಃಖಕ್ಕೀಡುಮಾಡಬಹುದೆಂದು ಮುಂತಾಗಿ ಸಂಶಯ ಹೊಂದಿ ಅವರು ಮದುವೆಯಾಗದೇ ಇದ್ದಿರಬಹುದು

"ನನ್ನ, ಮಿತ್ರ ಜೂಲಿಯನ್ನನು ಮದುವೆಯಾದ. ಅವನ ಹೆಂಡತಿ ಸುರೂಪಿ, ಸುಗುಣಿ; ಜಾಣೆ, ಅವನಿಗೆ ಸರಿಯಾದವಳೆಂದೇ ನನ್ನ ಆಗಿನ ಭಾವನೆ. ಅವಳಿವನನ್ನು ಬಹಳ ಉತ್ಸುಕತೆಯಿಂದ ಪ್ರೀತಿಸುವಳಂತೆ ನನಗೆ ಕಂಡು ಬಂತು. ಉಂಗುರುಂಗುರ ಕೂದಲುಗಳು ಅವಳ ಚೆಲುವಿಕೆಗೆ ಕಳೆತಂದಿದ್ದವು.

"ಅವಳು ಬಲು ಚೆಲುವಿ. ಅವರಿಬ್ಬರ ಪ್ರೀತಿಯ ಜೀವನಕ್ಕೆ ಭಂಗ ಬರಬಾರದೆಂದು ನಾನು ಅವರ ಮನೆಗೆ ಹೆಚ್ಚು ಹೋಗುತ್ತಿರಲಿಲ್ಲ ಆದರೂ ಅವರ ಒತ್ತಾಯದ ಆಮಂತ್ರಣದ ಮೇರೆಗೆ ಅನೇಕ ಸಲ ಹೋಗಲೇ ಬೇಕಾಯಿತು. ಅವರು ನನ್ನಲ್ಲಿ ಹೆಚ್ಚು ವಿಶ್ವಾಸ ಪ್ರೀತಿಯನ್ನು ತೋರುತ್ತಿದ್ದರು. ಅವರಿಬ್ಬರ ಕೂಡಿದ ಬಾಳು, ಅವರಲ್ಲಿ ಬೆಳೆಯುತ್ತ ಬಂದ ಪ್ರೇಮ,

ವಿಶ್ವಾಸ, ಅವರ ದಾಂಪತ್ಯ ಜೀವನದ ಸವಿ ನೋಟಗಳು, ನನ್ನನ್ನು ಅನೇಕ ಸಲ ಪ್ರೇಮ ವ್ಯವಹಾರದಲ್ಲಿ ಬೀಳುವಂತೆ ಮಾಡಿ ಮದುವೆಯಾಗಬೇಕೆಂಬ ಹಂಬಲವನ್ನುಂಟು ಮಾಡಿದವು ಆದರೆ ಶಾಂತತೆಯಿಂದ ಮುಂದರಿಯು ವುದು ಒಳಿತೆಂದು ಸುಮ್ಮನಿದ್ದೆ ಮದುವೆಯ ಗೋಜಿಗೆ ಹೋಗಲಿಲ್ಲ "

ರೂಢಿಯಂತೆ ಒಂದು ಸಂಜೆ ಊಟಕ್ಕೆ ಬರಬೇಕೆಂದು ನನಗೆ ಅವ ರಿಂದ ಒತ್ತಾಯದ ಕರೆ ಬಂದಿತು. ನಾನು ಹೋಗಲೇಬೇಕಾಯಿತು.

" ಊಟವಾದನಂತರ ಅವನು ಅವಸರದ ಕೆಲಸದ ಮೇಲೆ ಹೊರಗೆ ಹೋಗಬೇಕಾದುದರಿಂದ ತನ್ನವಳಾದ ಬರ್ತಳೊಂದಿಗೆ ರಾತ್ರಿ ಹನ್ನೊಂದರ ವರೆಗೆ ಇರಬೇಕೆಂದೂ ತಾನು ಬಂದನಂತರ ನಾನು ಮನೆಗೆ ಹೋಗಬಹು ದೆಂದೂ ಸೂಚಿಸಿದನು. ಕೆಲಸವು ಬಹಳ ಅವಸರದ್ದಾದುದರಿಂದ ಅವನು ಮಾತನಾಡದೆ, ನಮ್ಮಿಬ್ಬರನ್ನೇ ಬಿಟ್ಟು ಹೋಗಿ ಬಿಟ್ಟ

" ಅವನು ಹೋಗುವಾಗ ರಾತ್ರಿ ಎಂಟು ಹೊಡೆದಿತ್ತು. ಹನ್ನೊಂದರ ಸಮಯಕ್ಕೆ ತಪ್ಪದೇ ಬರುವೆನೆಂದು ಜೂಲಿಯನ್ನ ತನ್ನ ಕೆಲಸದ ಮೇಲೆ ಹೊರಟುಹೋಗಿದ್ದ. ಆ ದೊಡ್ಡ ಪಡಸಾಲೆಯಲ್ಲಿ ನಾವೀರ್ವರೇ ಇದ್ದೆವು. ಮನೆಯ ಸೇವಕರು ತಮ್ಮ ಕೆಲಸವನ್ನು ಮುಗಿಯಿಸಿಕೊಂಡು ಹೋಗಿಬಿಟ್ಟಿದ್ದರು. ಜೂಲಿಯನ ಹೋದನಂತರ ಅವಳ ಮುಖದ ಮೇಲೇತಕ್ಕೊ ಹೆಚ್ಚಿನ ಉತ್ಸಾಹದ ಕಳೆ ಕಂಡುಬಂತು. ನನಗೂ ಒಂದು ಬಗೆಯ ಹೃದಯ ವಿಕಾರವಾದಂತೆನಿಸಿತು. ನಾನಾವುದೋ ಲೋಕಾಭಿರಾಮದ ವಿಚಾರ ಮಾತ ನಾಡುತ್ತಿದ್ದೆ ಅವಳು ಸುಮ್ಮನೆ ನನ್ನನ್ನು ನೋಡುತ್ತ ಕುಳಿತಿದ್ದಳು. ಕಣ್ಣಿನ ಮೂಕ ಸನ್ನೆಯಿಂದಲೇ ತನ್ನ ಮಾರುತ್ತರಗಳನ್ನು ಸೂಚಿಸುತ್ತಿದ್ದಳು. ಇದ ರರ್ಥ ಮೊದಲಿಗೆ ನನಗಾಗಲಿಲ್ಲ. ನಾನು ಮತ್ತೆ ಸುಮ್ಮನಿದ್ದುಬಿಟ್ಟೆ. ಮುಂದೆ ಸ್ವಲ್ಪ ಸಮಯದಲ್ಲಿ ನನ್ನ ದೇಹವೆಲ್ಲವೂ ಪುಲಕಾಂಕಿತವಾದಂತೆನಿಸಿತು ಹುಚ್ಚು ಕಾಮವಾಸನೆ ನನ್ನನ್ನಾವರಿಸಬಹುದೇನೋ ಎಂಬಂತೆನಿಸಿತು. ನನ್ನೆದುರು ಕುಳಿತಿದ್ದ ಆ ಮನೋಹರ ಮೂರ್ತಿಯ ಮನಸ್ಸು ಕಾಮ ವಾಸನೆಯ ಕಡೆ ಹರಿಯುತ್ತಿರುವುದೆಂದೆಂಬಂತೆ ನನ್ನೆದೆ ಹೇಳತೊಡಗಿತು. ಸುಮ್ಮನೆ ಮೂಕರಂತೆ ಕುಳಿತಿರುವುದು ನನಗೂ ಬೇಸರವೆನಿಸಿತು.

" ಹೀಗೆ ಕೊಂಚ ಸಮಯ ಕಳೆಯಿತು. ಬರ್ತಳು ನನ್ನನ್ನುದ್ದೇಶಿಸಿ,

'ಮಿತ್ರರೆ ದಯವಿಟ್ಟು ಆ ಸಣ್ಣ ಕೊರಡನ್ನು ಒಲೆಯಲ್ಲಿರಿಸುವಿರಾ? ಬೆಂಕಿ ಆರುವಂತಿದೆ. ಒಂದೆರಡು ತುಂಡುಗಳನ್ನು ಇರಿಸಿದರೆ ಒಳಿತು" ಎಂದು ಸೂಚಿಸಿದಳು.

"ಕೊರಡುಗಳನ್ನು ಸಮನಾಗಿ ತುಂಡರಿಸಿ ಇರಿಸಿದ್ದ ಪೆಟ್ಟಿಗೆಯಿಂದ ಒಂದೆರಡು ತುಂಡುಗಳನ್ನು ತೆಗೆದು ಬೆಂಕಿಯಲ್ಲಿರಿಸಿದೆ ಅದರಲ್ಲಿಯ ಬೆಂಕಿ ಯನ್ನು ಚದುರಿಸಿ ಎಲ್ಲವೂ ಸಮವಾಗಿ ಉರಿಯುವಂತೆ ಮಾಡಿದೆ.

"ಮತ್ತೆ ಅನಾವಶ್ಯಕವಾದ ಮೌನ ಸ್ವಲ್ಪೇ ಸಮೀಪದಲ್ಲಿದ್ದ ಆ ಒಲೆ ಯಲ್ಲಿಯ ಉರಿಯು ಹೆಚ್ಚಾಗಿ ಅದರ ಝಳ ಕಷ್ಟವನ್ನುಂಟುಮಾಡಿತು. ಅದನ್ನು ಕಂಡು ಬರ್ತಳು ತಗ್ಗಿಸಿದ ಮುಖವನ್ನೆತ್ತಿ ನನ್ನಕಡೆ ನೋಡುತ್ತ 'ಇಲ್ಲಿ ಬಹಳ ಬಿಸಿಯಾಗಿದೆ. ಸ್ವಲ್ಪ ದೂರ ಅಲ್ಲಿರುವ ಸೋಫಾದ ಮೇಲೆ ಕೂಡೋಣವೆ' ಎಂದಳು.

ಅವಳ ಇಚ್ಛೆಯಂತೆ ಪಡಸಾಲೆಯ ತುದಿಯಲ್ಲಿರಿಸಿದ್ದ ಆ ದೊಡ್ಡ ಸೋಫಾದ ಮೇಲೆ ಇಬ್ಬರೂ ಕುಳಿತೆವು.ಬರ್ತಳು ನನ್ನ ಕಡೆ ನಸುನಗುವಿನಿಂದ ನೋಡುತ್ತ 'ಈಗ ಓರ್ವಯುವತಿ ನಿಮ್ಮನ್ನು ಪ್ರೇಮಿಸುವೆನೆಂದು ಹತ್ತಿರ ಬಂದರೆ ನೀವೇನು ಮಾಡುವಿರಿ? ನೀವವಳ ಪ್ರೇಮದ ಕಡೆಗೆ ಸಮ್ಮತಿಸು ವಿರಾ?' ಎಂಬ ಅನಿರೀಕ್ಷಿತವಾದ ಪ್ರಶ್ನೆ ಕೇಳಿದಳು. ನನಗಾಶ್ಚರ್ಯವೆನಿ ಸಿತು. ಆದರೂ ಚೇತರಿಸಿಕೊಂಡು 'ನನ್ನ ನಿರ್ಣಯ ಆಕೆ ಎಂತಹ ಸ್ತ್ರೀ ಯೆಂಬುದನ್ನನುಸರಿಸುತ್ತದೆ; ಆದರೂ ಅಂತಹ ಅನುಭವ ನನಗಾಗುವ ಸಂಭವವಿಲ್ಲೆಂದು ನನ್ನ ಭಾವನೆ' ಎಂದು ಸ್ಪಷ್ಟ ಹೇಳಿದೆ

"ಅವಳೊಂದು ದೀರ್ಘ ನಿಟ್ಟುಸಿರನ್ನು ಬಿಡುತ್ತ ಕೊಂಚ ನಕ್ಕಳು. ಆ ಮಂದಹಾಸದಲ್ಲಿ ಎಂತಹ ದಪ್ಪವಾದ ಕನ್ನಡಿಯನ್ನು ಚೂರಾಗಿರಿಸುವ ಪ್ರಖರತೆ ಇತ್ತೆಂದು ನನಗೆ ತಿಳಿಯಿತು. 'ಗಂಡಸರು ಮಂದಗಾಮಿಗಳು' ಎಂದ ಮಾತನ್ನು ಮುಂದುವರಿಸಿ, ನನ್ನನ್ನೊಂದು ಸಲ ದಿಟ್ಟಿಸಿ ನೋಡಿ ಮತ್ತೆ 'ಪಾಲ್ ಮಹಾಶಯರೇ, ನೀವು ಹಿಂದೆ ಯಾವ ಸ್ತ್ರೀಯನ್ನಾದರೂ ಪ್ರೀತಿಸಿದುದುಂಟೇ?' ಎಂದು ಕೇಳಿದಾಗ ನಾನು ಇಲ್ಲೆಂಬ ಸಾಹಸ ಮಾಡದೇ ಒಂದು ಕಲ್ಪಿತಕತೆಯನ್ನು ವರ್ಣಿಸಿದೆ ಬಹು ಎಚ್ಚರದಿಂದ ಅದೆಲ್ಲವನ್ನು ಕೇಳಿಕೊಳ್ಳುತ್ತ, ನನ್ನ ವರ್ಣನೆಯ ನಡುವೆ ಅಡ್ಡ ಬಂದು

" ಕ್ಷಮಿಸಿ, ನಿಮಗೆ ಪ್ರೇಮದ ಬಗ್ಗೆ ಯಾವ ಅನುಭವವೂ ಆಗಿಲ್ಲವೆಂದು ನನ್ನ ಶೀರ್ವಾನ ಪ್ರೇಮದಲ್ಲಿ ಸಿಕ್ಕಿ ಬಿದ್ದ ಕಾಮುಕನ ಮನಸ್ಸು ಸ್ಥಿಮಿತದಲ್ಲಿರುವುದಿಲ್ಲ. ಅವನು ಒಂದೇ ಸವನೆ ಉದ್ರೇಕಾವಸ್ಥೆಯಲ್ಲಿರುವನು. ಅವನ ತಲೆ ಸಮವಿರುವುದಿಲ್ಲ, ಅನಿಶ್ಚಿತ ಮನಸ್ಸಿನಿಂದ ಅವನು ಗೊಂದಲದಲ್ಲಿ ಬೀಳುವುದು ಸಹಜ ಎಂತಹ ಸಾಹಸದ ಕಾರ್ಯ ಮಾಡಲೂ ಅವನಾಗ ಹಿಂಜರಿಯುವುದಿಲ್ಲ ಯಾವ ಬಗೆಯ ಧಾರ್ಮಿಕ ತೊಂದರೆಗಳನ್ನು ಅತಿಕ್ರಮಿಸಲು ಸಿದ್ಧನಾಗುವನು ಕೊಲೆಮಾಡಲು ಸಹಾ ಸಿದ್ಧನೇ ಆ ಪ್ರೇಮೋಪಾಸಿಯು ಯಾರನ್ನು ತೊರೆಯಲೂ ಹಿಂಜರಿಯುವುದಿಲ್ಲ, ಎಂತಹ ಘೋರ ಕಾರ್ಯವನ್ನು ಸಹಾ ಮಾಡಲು ಅಳುಕುವುದಿಲ್ಲ ಯಾವ ಪ್ರೇಮ ವ್ಯವಹಾರದಲ್ಲಿ ಇಂತಹ ತೊಂದರೆಗಳು, ಸಾಹಸಗಳು, ಅನಿರೀಕ್ಷಿತ ಸಮಾವೇಶಗಳು, ಹೃದಯ ವಿದ್ರಾವಕ ಸಂಘಟನೆಗಳು, ಮುಂತಾದವು ಗಳಿರುವುದಿಲ್ಲವೋ ಅದನ್ನು ನಿಜವಾದ ಪ್ರೇಮವೆನ್ನಬಹುದೇ ? " ಎಂದು ಉದ್ರೇಕಗೊಂಡು ಅವಸರವಸರದಿಂದ ಪ್ರಶ್ನೆಗಳ ಮಳೆಯನ್ನು ಸುರಿಸಿದಳು

" ಅವಳ ಈ ಮಾತುಗಳಿಗೆ ದಂಗು ಬಡಿದು ಸ್ವಲ್ಪ ಸಮಯ ಸುಮ್ಮನಿದ್ದು ಬಿಟ್ಟೆ ಕೊಂಚ ಸಮಯ ಯೋಚಿಸುತ್ತ" ಸ್ತ್ರೀಬುದ್ಧಿಃ ಪ್ರಳಯಾಂತಕಃ ವೆಂಬ ಮಾತು ನಿಜವಲ್ಲವೆ? ಸ್ತ್ರೀಯಳ ಮೆದುಳಿಗೆ ಹೊಳೆಯದ ಯೋಚನೆಯೇ ಇಲ್ಲವೆಂದು ಮನದಲ್ಲಿಯೇ ನೆನೆದು ಸುಮ್ಮನಿದ್ದೆ.

ನಾನೀರೀತಿ ಸುಮ್ಮನಿರಲು ಮೆಲ್ಲನೆ ಅವಳು ನನ್ನ ಹತ್ತಿರ ಸರಿದು ಬಂದು ಹೆಗಲ ಮೇಲೆ ತಲೆಯನ್ನಿರಿಸಿದಳು ತನ್ನ ಪ್ರೇಮದ ನೋಟವನ್ನು ನನ್ನ ಮೇಲೆ ಬೀರುತ್ತ ' ಈ ನನ್ನ ವರ್ತನೆಯಿಂದ ನಿಮ್ಮನ್ನು ಬೆರಗುಗೊಳಿಸಿದೆನೆ ?' ಎಂದು ಕೇಳಿದಾಗ ಇಲ್ಲವೆಂದು ತಲೆಯನ್ನಲ್ಲಾಡಿಸಿದೆನು ಮತ್ತೆ ತನ್ನ ತಲೆಯನ್ನು ನನ್ನೆಡೆಗೆ ಗಟ್ಟಿಯಾಗಿ ಅಮುಕುತ್ತ ನಿಮ್ಮನ್ನು ನಾನು ಬಹಳ ದಿನಗಳಿಂದ ಪ್ರೀತಿಸುತ್ತಲಿದ್ದೇನೆ. 'ಆ ಸಮಯ ಈಗ ಸಾಧಿಸಿತು. ಈಗ ನಿಮ್ಮ ಸಹವಾಸ ಇಚ್ಛಿಸಿದರೆ ನೀವೇನು ಮಾಡುವಿರಿ?' ಎಂದು ಕೇಳಿದಳು.

" ನನ್ನಿಂದ ಮಾರುತ್ತರ ಬರುವುದಕ್ಕೆ ಮುನ್ನವೇ, ತನ್ನೆರಡು ಕೈಗಳನ್ನು ನನ್ನ ಕೊರಳಿನಸುತ್ತ ತಂದು ತಬ್ಬಿಕೊಳ್ಳುತ್ತ ನನ್ನನ್ನು ಬಹು ಸಲ ಉಸಿರುಗಟ್ಟುವ ಹಾಗೆ ಚುಂಬಿಸಿದಳು

" ಮಿತ್ರಳೇ ನಿನಗೆ ನಿಜವಾದ ಮಾತು ಹೇಳಬೇಕೆಂದರೆ, ಈ ಪ್ರಸಂಗ ನನಗೆ ರುಚಿಸಲಿಲ್ಲ. ನನಗಾವ ಬಗೆಯ ಹರುಷವನ್ನೂ ಉಂಟುಮಾಡಲಿಲ್ಲ. ಜೀವಗೆಳೆಯನಾದ ಜೂಲಿಯನ್ನನಿಗೆ ಮೋಸ ಮಾಡುವುದೆ? ಕಾಮದಾಹ ಶಮನಕ್ಕಾಗಿ ದಾಂಪತ್ಯಜೀವನದ ಪವಿತ್ರತೆಯನ್ನು ಅಲಕ್ಷಿಸಿ ಗಂಡನನ್ನು ವಂಚಿಸುವ ಆ ನೀಚ ಸ್ತ್ರೀಯಳ ಸಹವಾಸ ನನಗೆ ಹೇಯವೆನಿಸಿತು ಅಲ್ಲದೆ ನಂಬಿದವನಿಗೆ ಮೋಸ ಬಗೆಯುವುದು ಮಾನವತೆಯ ಲಕ್ಷಣವಲ್ಲವೆಂದು, ಶೀಲವೇ ಮಾನವನಿಗೆ ಭೂಷಣವೆಂದು ನೆನೆದ ನನಗೆ ಅವಳ ಅತಿ ಹೇಯ ವರ್ತನೆಗೇನು ಮಾಡಬೇಕೆಂಬುವುದು ತೋಚದಂತಾಯಿತು ಉದ್ರೇಕ ಗೊಂಡ ಇವಳೊಂದಿಗೆ ಮುಂದೆ ಹೇಗೆ ನಡೆದುಕೊಂಡರೆ ಈ ಗಂಡಾಂತರ ಕಳಂಕವಿಲ್ಲದೆ ದೂರಾಗುವುದೆಂಬುವುದೇ ನನ್ನ ಆಗಿನ ಯೋಚನೆಯಾಗಿತ್ತು. ಸ್ತ್ರೀಯಳ ಸವಿ ಮುದ್ದನ್ನೇ ಅರಿಯದ ನನ್ನ ಆಗಿನ ಅವಸ್ಥೆ ಬಹು ಸೋಜಿಗ ವಾಗಿತ್ತಾದರೂ, ನನ್ನ ಸ್ನೇಹಿತನ ಸತಿಯನ್ನು ಕೆಡಿಸುವ ಹೀನತನ ನನ್ನದಾ ಗಿದ್ದಿಲ್ಲ. ದೇವರೇ, ಏನುಮಾಡಬೇಕಪ್ಪಾ! ನನ್ನನ್ನು ಈ ವಿಪತ್ತಿನಿಂದ ಪಾರುಮಾಡೆಂದು ಮನದಲ್ಲಿಯೇ ನೆನೆದೆ. ನನಗಾಗ ಪೂರ್ಣ ಎಚ್ಚರವಿರ ಲಿಲ್ಲ.

" ಮರುಕ್ಷಣದಲ್ಲಿ ನಾನವಳ ವಶಳಾಗುವೆನೇನೋ ಎಂಬಂತಿತ್ತು ಪರಿ ಸ್ಥಿತಿ. ಅದೇ ಸಮಯಕ್ಕೆ ಸರಿಯಾಗಿ ಭೀಕರ ಸಪ್ಪಳ ನಮ್ಮಿಬ್ಬರನ್ನೆಚ್ಚರಿಸಿತು. ಒಲೆಯಿಂದ ಹೊರಬಿದ್ದ ಕರಾಳ ಉರಿಯ ಚಟಚಟವೆಂಬ ಸದ್ದು ನಮ್ಮ ದೃಷ್ಟಿಯು ಸೆಳೆಯಿತು. ಒಲೆಯಿಂದ ಉರಿಯುವ ಒಂದು ಕೊರಡು ನೆಲ ಕ್ಕುರುಳಿ ಅಲ್ಲಿಯ ಕಂಬಳಿಯನ್ನು ಸುಡಹತ್ತಿತು.

" ಅವಸರದಿಂದ ಅದನ್ನು ಆರಿಸಲು ನಾನು ಓಡಿದೆ. ಉರಿಯುವ ಕೊರಡನ್ನು ಒಲೆಯಲ್ಲಿರಿಸುತ್ತಿರುವಾಗ ನನ್ನ ಮಿತ್ರ ಜೂಲಿನ್ನನು ಬಾಗಿಲನ್ನು ತೆರೆದು ಒಳಗೆ ಬರುತ್ತ 'ಮಿತ್ರಾ ನನ್ನ ಕೆಲಸ ಎರಡು ಗಂಟೆಗಳ ಮುಂಚೆಯೇ ಮುಗಿಯಿತು. ಆದುದರಿಂದ ನಾನು ಬೇಗ ಬಂದೆ. ನಿನಗೆ ತೊಂದರೆಯಾ ಯಿತೆ?' ಎಂದು ಹೇಳಿದ. ಹೋದ ಉಸಿರು ತಿರುಗಿ ಬಂದಂತಾಯಿತು. ಮನದಲ್ಲಿಯೇ ಹಿಗ್ಗಿದೆ.

" ಗೆಳತಿಯೇ, ಆ ಉರಿಯುವ ಕೊರಡು ನಮ್ಮಿಬ್ಬರನ್ನು ಆಗ ಅಗಲಿಸದಿದ್ದಗೆ ಮುಂದೇನಾಗುತ್ತಿತ್ತೋ ಹೇಳಲಾರೆ. ನನ್ನ ಸ್ಥೈರ್ಯ ಧೈರ್ಯದ ಮಾತು ಇದ್ದೇ ಇದೆ ಆದರೆ ದೇವರು ದೊಡ್ಡವ.... .

" ಮುಂದೆ ಇಂತಹ ಪ್ರಸಂಗಗಳಲ್ಲಿ ಸಿಕ್ಕಿ ಬೀಳುವ ಗೋಜಿಗೆ ನಾನು ಹೋಗಲೇ ಇಲ್ಲ. ಇದಾದ ನಂತರ ನಮ್ಮಿಬ್ಬರ ಸ್ನೇಹಕ್ಕೆ ಚ್ಯುತಿ ಬಾರದಿದ್ದರೂ, ಸಲುಗೆ ಕಡಿಮೆಯಾಯಿತು ಇದಕ್ಕೆ ಬರ್ತಾಳೇ ಕಾರಣಳೆಂದು ನಾನು ಊಹಿಸಿದೆ. ಕೆಲಕಾಲದನಂತರ ನಾವು ಮತ್ತೆ ಭೆಟ್ಟಿಯಾಗಲೇ ಇಲ್ಲ. ನಮ್ಮ ಗೆಳೆತನ ಮುರಿದುಹೋಯಿತು.

" ನಾನು ಮುಂದೆ ಮದುವೆಯಾಗಲೇ ಇಲ್ಲ "

( —The Log )

# ಕಣ್ಸನ್ನೆ

ಜಮೀಂದಾರಿಣಿಯಾದ ರೆನಿಡಾನಳು ಇನ್ನೂ ತನ್ನ ಕೋಣೆಯಲ್ಲಿ ಮಲಗಿದ್ದಳು ಅವಳೊಬ್ಬ ಶ್ರೀಮಂತಳೆಂಬುವುದು ತಿಳಿದ ವಿಷಯ; ಕೋಣೆಯಲ್ಲಿ ಹರಡಿಕೊಂಡಿದ್ದ ಸುವಾಸನೆ ಇನ್ನೂ ಗಮಗಮಿಸುತ್ತಿತ್ತು

ಸುಪ್ಪತ್ತಿಗೆಯ ತಲೆದಿಂಬುಗಳ ನಡುವೆ, ಬಹು ಮೆತ್ತನ್ನ ಹಾಸಿಗೆಯಲ್ಲಿ ಸುಖದ ಕನಸುಗಳನ್ನು ಕಾಣುವ ಅವಳ ರಸಮಯ ಜೀವನವು ಒಂದು ಮಾದರಿಯದೆಂದರೆ ತಪ್ಪಲ್ಲ ಹಾಸಿಗೆಯಲ್ಲಿ ಮಲಗಿದ್ದುದ್ದೋರ್ವಳೆ ಮದುವೆಯಾದ ಗಂಡನಿಂದ ಅಂದೇ ಸೋಡಚೀಟಿಯಿಂದ ಬಿಡುಗಡೆ ಹೊಂದಿ, ವೇದನೆಯ ಜೀವನದಿಂದ ದೂರಾದುದರಿಂದ ಯಾವ ತೊಂದರೆ ಇಲ್ಲದೆ ಸುಖನಿದ್ರೆ ಮಾಡಿದವಳಂತಿತ್ತು, ಅವಳ ಮುಖದ ಮೇಲೆ ಕಂಡು ಬಂದ ವಿಲಾಸದ ಚಿಹ್ನ

ಅವಳಿಗೆ ಎಚ್ಚರವಾದುದು ಮಲಗುವ ಕೋಣೆಯ ಬದಿಗಿದ್ದ ಮತ್ತೊಂದು ವಿಶಾಲವಾದ ಪಡಸಾಲೆಯಲ್ಲಿ ನಡೆದ ಮಾತಿನ ರಭಸದ ಗಲಾಟೆಯ ಕಾರಣದಿಂದ ತನಗೆ ಪರಿಚಿತಳಾದ ಓರ್ವ ಹೊಸ ವ್ಯಕ್ತಿಯನ್ನು ಮನೆಯ ಹೆಣ್ಣಾಳು ದುಡುಕಿ ಕೋಪಗೊಂಡು ಒಳಗೆ ಬರಲು ತಡೆದುದರಿಂದ ಅವರ ಒದರಾಟ ಇವಳನ್ನೆಬ್ಬಿಸಿತು ಆದುದರಿಂದ ಎದ್ದವಳೇ ಕದಡಿದ ತನ್ನ ಸುಂದರ ತಲೆಕೂದಲ ನಡುವೆ ಚೆಲುವಾಗಿ ಕಾಣುವ ಮುಖದಿಂದ ಪರದೆಯನ್ನು ಕೊಂಚ ಓರೆಮಾಡಿ, ಹೊರಗಿನವರಿಗೆ ಕಾಣುವಂತೆ ನಿಂತಳು. ಅದೇ ತಾನೇ ಸುಖನಿದ್ರೆಯಿಂದ ಎದ್ದ ಅವಳ ಮುಖವು ಕಳೆಯಿಂದ ಮಿನುಗುತ್ತಿತ್ತು. ಆರೋಗ್ಯಚಿಹ್ನೆಯಿಂದ ಅವಳ ನಗು ಮುಖವು ಬಹು ಚೆಲುವಾಗಿ ಕಾಣುತ್ತಿತ್ತು.

“ಇದೇನು ಇಷ್ಟು ಬೇಗ ಬರೋಣವಾಯಿತು? ಇನ್ನೂ ಒಂಭತ್ತು ಹೊಡೆದಿಲ್ಲ?” ಎಂದು ಆ ಯುವತಿಯನ್ನು ಕೇಳಿದಳು ಹೊರಗಿನಿಂದ ಬಂದ ಆ ಯುವತಿಯು ಬಹಳ ನೊಂದು ಪರಿತಪಿಸಿದ ದಣಿದ ಮುಖದಿಂದ ಸುಮ್ಮನೆ ಒಂದು ಸಲ ನೋಡಿ, ಗುಟ್ಟು ದಣಿದಿದ್ದ ಇದ್ದ ಆಯಾಸನಿಂದಲೂ, ನಿರುತ್ಸಾಹದಿಂದಲೂ, ರಾತ್ರಿ ಜಾಗರಣದಿಂದ ಪ್ರಯಾಣದಿಂದ ಸ್ಥಿಮಿತದಲ್ಲಿಲ್ಲದ

ಹೃದಯದಿಂದ ಆ ಯುವತಿ—ಗ್ರಾನಿಗೇರಿಯ ಜಮೀಂದಾರಿಣಿ—"ಅವಸರದ ಮಾತಿದೆ. ನಾನು ಬಹಳ ತೊಂದರೆಯಲ್ಲಿದ್ದೇನೆ ನನ್ನ ಮನಸ್ಸು ಹೆಚ್ಚು ಕಳವಳಗೊಂಡಿದೆ. ಪ್ರಮಾದದ ಕೆಲಸ, ನಾನೊಂದು ವಿಪತ್ತಿನಲ್ಲಿ ಸಿಕ್ಕಿರುವೆನು." ಎಂದು ಉದ್ವೇಗದಿಂದ ಹೇಳಿದಳು.

"ಒಳಗೆ ಬಾ! ದಯವಿಟ್ಟು ಕುಳಿತುಕೋ ಸಿಧಾನವಾಗಿ ನಿನ್ನ ಕತೆಯನ್ನು ಹೇಳು."

ಕೋಣೆಯಲ್ಲಿ ಇಬ್ಬರೂ ಸಮೀಪದಲ್ಲಿ ಕುಳಿತು ಸ್ನೇಹ ಸೂಚಕವಾಗಿ ಪರಸ್ಪರ ಮುದ್ದಿಟ್ಟುಕೊಂಡನಂತರ ರೀನೀಡಾನಳು ಮತ್ತೆ ತನ್ನ ಮೆತ್ತನ ಹಾಸಿಗೆಯಲ್ಲಿ ಒರಗಿದಳು ದಾದಿಯು ಮುಂಜಾವಿನ ಸ್ವಚ್ಛ ಹವೆ ಬರಲೆಂದು ಕಿಡಿಕಿಗಳನ್ನು ತೆರೆಯಲು ಬೆಳಕು ಹರಡಿಕೊಂಡಿತು ದಾದಿಯು ಮರೆಯಾದನಂತರ "ನಿನ್ನ ಕತೆಯನ್ನು ಈಗ ನಿರ್ಭಯವಾಗಿ ಹೇಳಬಹುದು" ಎಂದು ಸೂಚಿಸಿದಳು.

ಮನೆಗೆ ಬಂದ ಆ ಯುವತಿ ಅಳತೊಡಗಿದಳು ಕಣ್ಣುಗಳಿಂದ ನೀರೂರಿ ಕೆಳಗುದುರುವಾಗ ಅವಳ ಮುಖದ ಚೆಲುವು ಇಮ್ಮಡಿಯಾಗಿತ್ತು ಕಣ್ಣುಗಳನ್ನೊರಸಿಕೊಳ್ಳದೆ, ಬಿಕ್ಕಿ, ಬಿಕ್ಕಿ ಅಳುತ್ತ, "ನಾನೇನೆಂದು ಹೇಳಲಿ? ನೆನೆಯಲಾರದಂಥ ವಿಪತ್ತು ನನಗಿಂದು ಸಂಭವಿಸಿದೆ ಇಡೀ ರಾತ್ರಿ ನನಗೆ ನಿದ್ದೆ ಇಲ್ಲ. ಒಂದರಕ್ಷಣವಾದರೂ ಕಣ್ಣು ಮುಚ್ಚಲಿಲ್ಲ ನನ್ನ ಈ ಮಾತಿನಲ್ಲಿ ವಿಶ್ವಾಸವಿರಲಿ ನೋಡಿಲ್ಲಿ, ನನ್ನೆದೆ ಎಷ್ಟು ವೇಗವಾಗಿ ಹೊಡೆದುಕೊಳ್ಳುತ್ತಿದೆ ನೀನು ಬೇಕಾದರೆ ಹತ್ತಿರ ಬಂದು ನೋಡು" ಎಂದು ಹೇಳುತ್ತ ಅವಳ ಕೈಗಳನ್ನು ತನ್ನೆದೆಯಮೇಲಿರಿಸಿದಳು ಸುಂದರವಾದ ಅವಳ ವಕ್ಷಸ್ಥಳವು ಅನೇಕ ಯುವಕರ ನೇತ್ರಗಳನ್ನು ಬೆರಗುಗೊಳಿಸಬಹುದಾಗಿತ್ತು ಆದರೆ ಅದೇ ವಕ್ಷಸ್ಥಳದಲ್ಲಿ ತನ್ನ ಕೈಯನ್ನಿಟ್ಟು ರೇನಿಡಾನಳು ನೋಡಿದಾಗ ಅವಳೆದೆಯು ಬಹು ವೇಗದಿಂದ ಹೊಡೆದುಕೊಳ್ಳುತ್ತಿರುವುದನ್ನು ಕಂಡು ಬೆರಗಾದಳು ಮಾನಸಿಕ ತೊಂದರೆಯಿಂದ ಹೌಹಾರಿ ಅಧೈರ್ಯ ಹೊಂದಿದ ಇವಳು ಯಾವುದೋ ವಿಪತ್ತಿನಲ್ಲಿ ಸಿಕ್ಕಿ ಬಿದ್ದಿರುವಳೆಂದು ನೆನೆದಳು. "ಧೈರ್ಯದಿಂದ ನಿನ್ನ ಕತೆಯನ್ನು ಹೇಳು ತಂಗಿ." ಎಂದು ಸೂಚಿಸಿದಳು

"ನಿನ್ನೆ ಸಂಜೆ ನಾಲ್ಕರ ಸಮಯವಿರಬಹುದು — ನನಗೆ ಅಷ್ಟು ವಿವರವಾಗಿ ನೆನಪಿಲ್ಲ — ಪ್ರೀತಿಯಿಂದ ಉತ್ಸಾಹದಿಂದ ನಾನು ನನ್ನ ಕೋಣೆಯ ಕಿಟಕಿಯನ್ನು ತೆಗೆದು ಕುಳಿತಿದ್ದೆ! ಸಂಜೆಯ ಸಮಯ ಹೀಗೆ ಕೂಡ್ರುವುದು ನನಗೆ ಬಹು ಪ್ರಿಯವಾದ ಕೆಲಸವೆಂದು ನಿನಗೆ ತಿಳಿದ ವಿಷಯ ನಾನು ಕುಳಿತುಕೊಳ್ಳುವ ಸ್ಥಳದ, ಮತ್ತು ನನ್ನ ಮನೆಯ ವಿವರಗಳು ನಿನಗೆ ತಿಳಿದಿವೆ. ವಾಡಿಕೆಯಂತೆ ನಾನು ಕಿಟಕಿಯ ಬಳಿ ಕುಳಿತಿದ್ದೆ ಹತ್ತಿರವೇ ಕಾಣುತ್ತಿದ್ದ ರೈಲ್ವೇ ನಿಲ್ದಾಣದಲ್ಲಿಯ ಗಡಬಿಡಿಯನ್ನು ನೋಡುವುದೆಂದರೆ ನನಗೆ ಬಹು ಕುತೂಹಲ, ಜನರ ನಗು, ಕಿಲಕಿಲ ಧ್ವನಿ, ಅವರ ಗಡಬಿಡಿಯ ಜೀವನವನ್ನು ನೋಡಿದರೆ ನನಗೆ ಬಹು ಉತ್ಸಾಹವೆನಿಸುತ್ತಿತ್ತು. ಕುರ್ಚಿಯಲ್ಲಿ ಕುಳಿತು ತೆರೆದ ಕಿಟಕಿಯಿಂದ ಕಾಣುವ ನೋಟವನ್ನು ಸುಮ್ಮನೆ ನೋಡುತ್ತ ಎಂದಿನಂತೆ ಕುಳಿತಿದ್ದೆ ನಿನ್ನೆ ಸಂಜೆ ಅದೊಂದು ಚೆಂದದ ಬಹು ಸುಂದರ ಸಮಯ. ನನ್ನ ಜೀವನದಲ್ಲಿ ಅಂತಹ ಹರುಷಮಯವಾದ ಸಂಜೆಯನ್ನು ನಾನು ಕಂಡಿರಲಿಲ್ಲ. ಅಮೋಘವಾದ ಸಂಜೆಯದು!

"ನಮ್ಮ ಮನೆಯ ಎದುರು ಸಾಲಿನಲ್ಲಿದ್ದ ಮನೆಯ ಕಿಟಕಿಯಲ್ಲಿ, ಓರ್ವ ಹೆಣ್ಣನ್ನು ನಾನು ನೋಡಿದೆ ಅವಳೋರ್ವ ನಸುಗೆಂಪು ಛಾಯೆಯ ಹೆಣ್ಣಿನಂತೆ ಕಂಡುಬಂದಳು ನಮ್ಮ ಮನೆಯ ಎದುರಿಗಿನ ಸಾಲಿನಲ್ಲಿ ಅವಳ ಚಿಕ್ಕ ಕೋಣೆಯಿತ್ತು. ಅದರ ಕಿಟಕಿಯಲ್ಲಿ ಕುಳಿತುಕೊಳ್ಳುವ ರೂಡಿ ಅವಳದಾಗಿತ್ತು ಆ ಬಾಡಿಗೆಯ ಮನೆಗೆ ಅವಳು ಹೊಸದಾಗಿ ಒಂದು ತಿಂಗಳ ಹಿಂದೆ ಬಂದಂತೆ ನನಗೆನಿಸಿತು; ಆದುದರಿಂದ ಅವಳ ಪರಿಚಯ ನನಗೆ ಪೂರ್ಣ ಇರಲಿಲ್ಲ ಅವಳ ಮೊದಲನೆಯ ದರ್ಶನದಿಂದ ಅವಳೊಬ್ಬ ಬೀದಿಯ ಬಸವಿಯೆಂದು ನನಗೆ ಕಂಡು ಬಂತು ಕೊಂಚ ಸಮಯ ಕಳೆದನಂತರ ಅನೇಕ ವಿಟರು ಅವಳ ಕಡೆ ದೃಷ್ಟಿ ಸಾರುತ್ತ ಹೊರಟರು ಅವಳ ಕಣ್ಣಲ್ಲಿಯ ಒಂದು ಮೋಹದ ಕರೆಯ ನೋಟ ಇವರನ್ನೂ ಆಕರ್ಷಿಸಿದಂತೆ ನನಗೆ ತೋರಿತು. ಇವಳು ಬೀದಿಯಲ್ಲಿ ಹಾದು ಹೋಗುವ ವಿಲಾಸ ಪುರುಷರಿಗೆ ಪರಿಚಿತಳೆಂದು ನಾನು ತರ್ಕಿಸಿದೆ. ಹಾದಿಯ ಹಾದು ಹೋಗುವ ಪ್ರತಿಯೊಬ್ಬ ವಿಲಾಸಿಯೂ ಇವಳೊಂದಿಗೆ ಮೂಕ ಸನ್ನಯಲ್ಲಿಯೇ ಮಾತನಾಡುತ್ತಲಿದ್ದನು. ಕೆಲವರು ತಮ್ಮಲ್ಲಿ ಸಾಕಷ್ಟು ಹಣವಿಲ್ಲವೆಂದು ಮುಂದೆ ಸಾಗುತ್ತಿ

ದ್ದರು. ಇತರರು ನಾಳೆ ಬರುವೆನೆಂದು ಹೇಳಿ ಮುಂದೆ ಸರಿಯುತ್ತಿದ್ದರು. ಈ ಎಲ್ಲ ಪ್ರಶ್ನೋತ್ತರಗಳು ಮೂಕ ಸನ್ನೆಯಲ್ಲಿಯೇ ನಡೆಯುತ್ತಿರುವ ಈ ಗುಪ್ತಭಾಷೆ ನನಗೆ ಹೊಸತೆನಿಸಿತು ನಾನು ಈ ಹೇಯ ವರ್ತನೆಯನ್ನು ಕಂಡು ಅಸಹ್ಯಗೊಂಡು ಕೊಂಚ ಕಿಟಕಿಯ ಬಾಗಿಲನ್ನು ಮುಚ್ಚಿದೆ ಆದರೆ ಮುಂದೇನು ನಡೆಯುವುದೆಂಬುದನ್ನು ನೋಡುವ ಕುತೂಹಲ ನನ್ನನ್ನು ಸುಮ್ಮನಿರಗೊಡಲಿಲ್ಲ. ಬಾಗಿಲು ತೆರೆದೆ, ಮತ್ತೆ ಅದೇ ವ್ಯವಹಾರ, ಅದರ ಪರಿಚಯವಿಲ್ಲದೆ ನನಗೆ ಇದು ಹೊಸತೆನಿಸಿದರೂ ಅವಳಿಗದು ದಿನದ ರೂಢಿಯ ಕೆಲಸದಷ್ಟು ಸಾಮಾನ್ಯ ವ್ಯವಹಾರವಾಗಿತ್ತು

"ಅನಿರೀಕ್ಷಿತವಾಗಿ ಅವಳು ಕಿಟಕಿಯ ಬಾಗಿಲನ್ನು ಮುಚ್ಚಿದಳು ಏಕೆಂದು ಬಾಗಿಲ ಕಡೆ ನೋಡಿದೆ ಓರ್ವ ವಿಟನು ಅವಳ ಮನೆಯನ್ನು ಪ್ರವೇಶಿಸಿ ಹತ್ತಿಪ್ಪತ್ತು ನಿಮಿಷಗಳ ನಂತರ ಹೊರಬಿದ್ದನು ಮಾತು ಕತೆ ಇಲ್ಲದೆ ಹಾದಿಯಲ್ಲಿ ಹೋಗುವ ವಿಟರ ಮೇಲೆ ಈ ಜಾರಿಣಿಯ ಮಾಯ ಜಾಲದ ವಿದ್ಯೆ ಹೇಗೆ ಫಲಿಸಿತೆಂಬುವುದು ನನಗೆ ತಿಳಿಯದಂತಾಯಿತು ಅವಳೇನು ಅಂತಹ ಸ್ಫುರದ್ರೂಪಿಯೂ ಅಲ್ಲದಿರುವಾಗ ವಿಟರನ್ನು ಆಕರ್ಷಿಸುವ ಮತ್ತಾವ ಶಕ್ತಿ ಅವಳಲ್ಲಿತ್ತೆಂಬುದನ್ನು ತಿಳಿಯಲು ನನ್ನ ಮನಸ್ಸು ಹಾತೊರೆಯತೊಡಗಿತು ಇವಳಿಗೆ ಯಾವುದೋ ಗುಪ್ತಭಾಷೆಯ ಪರಿಚಯವಿರಬೇಕೆಂದೆನಿಸಿತು. ನೋಡುವುದಕ್ಕೆ ಕುರೂಪಿಯಾದ ಇವಳಲ್ಲಿ ಜನರೇಕೆ ಪ್ರೇಮತೋರುವರೆಂಬುದರ ಅರಿವು ನನಗುಂಟಾಗಲಿಲ್ಲ.

"ಅವಳ ಆಕರ್ಷಣ ಶಕ್ತಿಗೆ ಕಾರಣವೇನಿರಬೇಕೆಂದು ಯೋಚಿಸಿದೆ. ಕಣ್ಣು, ಹುಬ್ಬು, ಮೂಗು ಕೈಸನ್ನೆಗಳಿಂದಲೋ, ಮತ್ತಾವ ವಿಧಾನದಿಂದಲೋ ಅವಳು ಜನರನ್ನು ಆಕರ್ಷಿಸುವಳೆಂಬ ಕುತೂಹಲ ನನ್ನಲ್ಲುಂಟಾಗಿ, ದುರ್ಬಿಣಿಯಿಂದ ಆ ದೃಶ್ಯವನ್ನು ನೋಡಿದೆ ಅವಳ ಹಾವ ಭಾವಗಳು, ಹುಬ್ಬಿನ ವಲನ ಚಲನಗಳೂ, ಅವಸರದ ಕೈಸನ್ನೆಯಿಂದಲೂ ಜನರನ್ನು ಆಕರ್ಷಿಸುವ ರೀತಿ ನನಗೆ ಸ್ಪಷ್ಟವಾಗಿ ತಿಳಿದು ಬಂತು. ಮೊದಲೊಂದು ನೋಟ, ಮುಂದೆ ಮಂದಹಾಸ, ಆನಂತರ ಮೇಲೆ ಬರುವೆಯಾಯೆಂಬ ಕೈಯಿಂದ ಕೂಡಿದ ಕಣ್ಸನ್ನೆ ಇವುಗಳೇ ಅವಳು ಉಪಯೋಗಿಸುತ್ತಿದ್ದ ಗುಪ್ತಭಾಷೆ. ಇದನ್ನು ಕಲಿಯಲು ಅಷ್ಟೇನು ಕಷ್ಟವಲ್ಲವೆಂದೆನಿಸಿತು

ಮನೆಯಲ್ಲಿಯ ದೊಡ್ಡ ಕನ್ನಡಿಯ ಮುಂದೆ ನಿಂತು ಅವಳಂತೆ ನಾನು ನಟಿಸಿದೆ ನನ್ನ ಅಭಿನಯ ಅವಳಿಗಿಂತಲೂ ಬಹು ಮನಮೋಹಕವಾಗಿತ್ತು. ಜನರನ್ನು ನಾನು ಬಹುಬೇಗ ಆಕರ್ಷಿಸಬಲ್ಲೆನೆಂದು ನೆನೆದುಕೊಂಡೆ

" ತೆರೆದಿದ್ದ ನನ್ನ ಕೋಣೆಯ ಕಿಡಕಿಯ ಬಳಿ ನಿಂತು ವಿಟರನ್ನು ಆಕರ್ಷಿಸುವ ವಿಧಾನಗಳನ್ನು ಮತ್ತು ಆ ಗುಪ್ತಭಾಷೆಯನ್ನು ಪ್ರಯೋಗಿಸತೊಡಗಿದೆ ಅವಳಿಗೆ ನಾನು ಸ್ಪರ್ಧೆಯಾಗಿ ನಿಂತ ನಂತರ ಅವಳ ಮನೆಯ ಕಡೆ ಯಾವ ವಿಟನೂ ಹಾದು ಹೋಗುತ್ತಿರಲಿಲ್ಲ. ಎಲ್ಲರೂ ನನ್ನ ಮನೆಯ ಮುಂದೆ ಇದ್ದ ರಸ್ತೆಯ ಕಡೆ ಬಂದು ನನ್ನನು ದಿಟ್ಟಿಸಿ ನೋಡುತ್ತ ನನ್ನ ಪ್ರೀತಿಯ ಕರ ಬರುವುದೆಂದು ಆಶಿಸಿ ಮುಂದೆ ಸಾಗುತ್ತಿದ್ದರು ಆಕರೆ-ಆ ಕೊನೆಯ ಅಸ್ತ್ರವನ್ನು ನಾನು ಉಪಯೋಗಿಸಲಿಲ್ಲ ಜನರು ನನ್ನ ಕಡೆ ನೋಡುತ್ತ ಹೋಗುವುದನ್ನು ಕಂಡು ನಾನು ಬೆದರಿದೆ ನನ್ನಿಂದ ಅವಳಿಗೆ ಯಾವ ಗಿರಾಕಿಯೂ ಬಾರದೆ ನಿರಾಶೆಯಿಂದ ಅವಳು ಮನದಲ್ಲಿಯೇ ಚಿಂತೆಯೊಳಗಾದುದನ್ನು ಕಂಡು ನಾನೂ ಮರುಗಿದೆ ಆದರೆ ಇಂತಹ ಅನುಭವ ನನಗೆ ಹೊಸದಾದುದರಿಂದ ಮುಂದೇನಾಗುವುದೋ ನೋಡುವ ಕುತೂಹಲದಿಂದ ನಾನು ಬೀದಿಯಲ್ಲಿ ಹಾದು ಹೋಗುವ ವಿಟರನ್ನು ನೋಡುತ್ತ ನಿಂತುಬಿಟ್ಟೆ ಅವರಲ್ಲಿ ಕೆಲವರು ನನ್ನ ಪತಿಗಿಂತಲೂ ಸುಂದರರೂ ಚಿತ್ತಾಕರ್ಷಿಗಳಾಗಿದ್ದರು ಅವರನ್ನು ಒಳಗೆ ಬಾಯೆಂದು ಸೂಚಿಸಲೇಯೆಂದು ನೆನೆದೆ ಆದರೆ ಧೈರ್ಯ ಸಾಲದೇ ಸುಮ್ಮನಿದ್ದುಬಿಟ್ಟೆ ಆದರೂ ಮನದ ಆರಾಟ ನನ್ನನ್ನು ಮುಂದಿನ ಕೆಲಸಕ್ಕೆ ಪ್ರೇರೇಪಿಸಿತು.

" ಮನದಲ್ಲಿಯೇ ಯೋಚಿಸಿದೆ, ಬಹು ಸುಂದರನೆಂದು ಕಂಡು ಬಂದ ಓರ್ವನನ್ನು ಒಳಗ ಬಾಯೆಂದು ಕರೆದರೆ ಅವನು ನನ್ನ ಕೋಣೆಗೆ ಬಂದರೆ ನಾನೇನು ಮಾಡುವುದು ? ನಾನು ಜಾರಣಿವೃತ್ತಿಯವಳಲ್ಲ ಮದುವೆಯಾದ ಗೃಹಿಣಿ ಈ ಬಗೆಯ ಸಂಕಟಕ್ಕೆ ಒಳಗಾದರೆ ಹೇಗೆ ? ನನ್ನ ಮರ್ಯಾದಗೆ ಕುಂದು ಬಂದರೆ ಮುಂದೇನು ಗತಿ ? ಈ ಚಪಲ ಮನೋವೃತ್ತಿಯನ್ನು ತಡೆದು ಸುಮ್ಮನಿರಲೆ ? ಹೀಗೆಂದು ಯೋಚಿಸಿದೆ; ಆದರೆ ನನ್ನ ಕುತುಹಲ, ನೂತನ ಯುವಕನನ್ನು ಸಂಧಿಸಿದರೆ ಆಗುವ ಆ ಅನುಭವದ ಕಲ್ಪನೆ, ಅದೊಂದು ಸ್ವರ್ಗಸಮಾನವಾದ ಸುಖದ ಅನುಭವವೆಂಬ

ಆಶೆ ನನ್ನನ್ನು ವೇಧಿಸಿತು ಕೊನೆಗೆ ಕುಚೇಷ್ಟೆಗಾದರೂ ಆ ಕೊನೆಯ ಪ್ರೇಮದ ಕರೆಯ ಚಿಹ್ನೆಯನ್ನುಪಯೋಗಿಸಿ ಮುಂದೆ ಪ್ರಸಂಗ ಬಂದರೆ ಅದರಿಂದ ಪಾರಾಗುವ ಯೋಚನೆ ಮಾಡಿದರಾಯಿತೆಂದು ಧೈರ್ಯತಾಳಿ ಕಿಟಕಿಯ ಬಳಿ ಬಂದು ನಿಂತೆ ಮನಸ್ಸಿಗೆ ಬಂದ ಕಾರ್ಯಮಾಡಿಯೇ ಬಿಡಬೇಕೆಂಬ ಸ್ವಭಾವ ನನ್ನದು. ಹೀಗೆಂದು ನಿರ್ಧರಿಸಿ ದಾರಿಯಲ್ಲಿ ಹಾದು ಹೋಗುವ ವಿಟರನ್ನು ಆಶೆಯ ಕಣ್ಣುಗಳಿಂದ ನೋಡ ತೊಡ ಗಿದೆ. ಓರ್ವ ಚೆಲುವ ಯುವಕನನ್ನು ಒಳಗೆ ಬರಮಾಡಿಕೊಳ್ಳಬೇಕೆಂಬ ಭಾವನೆಯಿಂದ ಅಂಥವರಾರಾದರೂ ಬರುವರೋ ಯೆಂದು ಕಾದು ನಿಂತೆ ಕೊನೆಗೆ ಓರ್ವ ಯುವಕನ ಮನಮೋಹಕ ಸುಂದರ ರೂಪು ನನ್ನನ್ನಾ ಕರ್ಷಿಸಿರಬೇಕು, ಮೊದಲು ಹುಸಿ ನಗುವಿನಿಂದ ನಮ್ಮಿಬ್ಬರ ದೃಷ್ಟಿಗಳು ಪರಸ್ಪರ ಕೂಡಿಕೊಂಡವು ಒಳಗೆ ಬರಬಹುದೆಂದು ಬಹು ಗುಪ್ತವಾಗಿ ಸನ್ನೆ ಮಾಡಿದೆ. ಕುಶಲನಾದ ಆ ಯುವಕನಿಗೆ ಅಷ್ಟೇ ಸಾಕಾಗಿತ್ತು ಆಗ ಬಹುದೆಂದು ತಲೆಯನ್ನು ಆಡಿಸಿ ನಮ್ಮ ಮನೆಯ ಹಿರಿಯ ಬಾಗಿಲ ಕಡೆ ಹೊರಳಿದ.

"ನನಗೆ ಹುಚ್ಚು ಹಿಡಿದಂತಾಯಿತು ಅವನು ಬಾಗಿಲನ್ನು ತಟ್ಟಿ ದರೆ, ನಮ್ಮ ಮನೆಯ ಆಳು ಮನುಷ್ಯ ಜೋಸಫೆನು ಇವನನ್ನು ಕಂಡರೆ ಪ್ರಮಾದವಾಗುವುದೆಂದು ಬೆದರಿದೆ ಜೋಸಫೆನಿಗೆ ನನ್ನ ಗಂಡನ ಮೇಲೆ ಹೆಚ್ಚು ವಿಶ್ವಾಸವಿತ್ತು, ಅವನು ಬಾಗಿಲನ್ನು ತೆರೆಯುವಾಗ ಈ ಆಗಂತು ಕನನ್ನು ಕಂಡರೆ, ನಮ್ಮೀರ್ವರಲ್ಲಿ ಬಹಳ ದಿನಗಳಿಂದ ಗೆಳೆತನವಿರುವು ದೆಂದು ಭಾವಿಸುವನೆಂದು ಬೆದರಿಸಿದೆ

"ಮುಂದೇನು ಮಾಡಬೇಕೆಂಬುದು ತೋಚದಾಯಿತು ಮನೆಯ ಆಳು ಬಾಗಿಲು ತೆರೆದರೆ ಅನರ್ಥ ಬಾಗಿಲನ್ನು ನಾನೇ ತೆರೆಯುವುದು ಕ್ಷೇಮ ವೆಂದು ಅಲ್ಲಿಗೆ ಓಡಿದೆ ಕಾಲ್‌ಬೆಲ್ ಹೊಡೆಯುವ ಮುನ್ನವೇ ಬಾಗಿಲು ತೆರೆದರೆ ಆಗಂತುಕನ ಆಗಮನ ಆಳುಗಳಿಗೆ ತಿಳಿಯದಿರುವುದೆಂದು ನೆನೆದು ನಾನೇ ಬಾಗಿಲು ಕಡೆ ಓಡಿದೆ. ಬಾಗಿಲ ತೆರದ ಕೂಡಲೇ ಕಾದುನಿಂತಿದ್ದ. ಅವನ ಮುಖದ ಮೇಲಿನ ಗೆಲುವು ನನಗರ್ಥವಾಗಲಿಲ್ಲ 'ಮಹಾಶಯರೆ, ತಾವು ಹೋಗಬಹುದು ಅಪರಿಚಿತರಿಗಿಲ್ಲಿ ಪ್ರವೇಶವಿಲ್ಲ ನೀವು ತಪ್ಪು

ಭಾವನೆಯಿಂದ ಇಲ್ಲಿಗೆ ಬಂದಿರುವಿರಿ. ನನ್ನ ಮಿತ್ರರೊಬ್ಬರು ನಿಮ್ಮಂತೆಯೇ ಇದ್ದುದರಿಂದ ನಿಮಗೆ ಆಮಂತ್ರಣವಿತ್ತಿ ಪ್ರಮಾದವಾಯಿತು. ನಾನು ಮದುವೆಯಾದ ಹೆಣ್ಣು. ಇದು ಕುಲೀನರ ಮನೆ. ದಯವಿಟ್ಟು ಹೊರಡಿ' ಎಂದು ಬೇಡಿಕೊಂಡೆ.

"ಅವನೊಬ್ಬ ನುರಿತ ಬೇಟೆಗಾರನಂತೆ ಕಂಡು ಬಂದ. ಸುಮ್ಮನೆ ನಕ್ಕು ಬಿಟ್ಟು 'ಚಿಂತೆ ಇಲ್ಲ ನಿನ್ನ ಪೂರ್ಣ ಪರಿಚಯ ನನಗಿದೆ. ಮದುವೆಯಾದವಳಾದುದರಿಂದ ನಿನಗೆ ಹೆಚ್ಚು ಹಣ ಕೊಡಬೇಕಲ್ಲವೆ? ಆ ಕರಾರಿಗೆ ನನ್ನ ಸಮ್ಮತಿ ಇದೆ ಗಂಡಂದಿರಿರುವ ಹೆಂಗಳೆಯರು ಹೆಚ್ಚು ಹಣ ಬೇಡುವರೆಂಬುವುದು ನನಗೆ ತಿಳಿದ ವಿಷಯ ಒಳಗೆ ಹೋಗಲು ನನಗೆ ದಾರಿ ತೋರು' ಎಂದು ಮುನ್ನುಗ್ಗಿದ ಮುಂದೆ ಬಂದು ಬಾಗಿಲನ್ನು ಮುಚ್ಚಿದ ನಂತರ ನನ್ನನ್ನು ಆಲಿಂಗಿಸಿ ಮುದ್ದಿಟ್ಟುಕೊಂಡ. ನನಗೆ ಜಗತ್ತೇ ಕಳಚಿ ಬಿದ್ದಂತೆನಿಸಿತು, ಎಚ್ಚರವಿರಲಿಲ್ಲ ನನ್ನ ಮಲಗುವ ಕೋಣೆಯ ಬಾಗಿಲು ತೆರೆದಿದ್ದುದರಿಂದ ಅಲ್ಲಿಗೆ ನನ್ನನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋದ. ಕೋಣೆಯು ಶ್ರೀಮಂತರ ಮನೆಯಂತೆ ವ್ಯವಸ್ಥಿತ ರೀತಿಯಲ್ಲಿರುವುದನ್ನು ಕಂಡು, 'ಓಹೋ, ನೀನೀವ್ಯಾಪಾರದಲ್ಲಿ ಪಳಗಿದವಳೆಂದೇ ಹೇಳಬಹುದು ಕಿಟಕಿಯಲ್ಲಿ ನಿಂತು ವಿಟರನ್ನು ಆಕರ್ಷಿಸಿ ಕರೆಯುವ ಈ ಕೀಳುದರ್ಜೆಯ ವ್ಯವಹಾರಕ್ಕೆ ಕೈಹಾಕುವ ಅವಸ್ಥೆಗೆ ನೀನು ಬರಲು ಕಾರಣವೇನು? ನಿನ್ನ ವ್ಯವಹಾರ ಸರಿಯಾಗಿ ನಡೆಯುತ್ತಿಲ್ಲವೆ?' ಎಂದು ಕೇಳಿದ

"ನನ್ನನ್ನು ಕಾಡಬೇಡವೆಂದು ಅವನನ್ನು ಬೇಡಿಕೊಂಡೆ. 'ಮಹಾಶಯರೆ ದಯವಿಟ್ಟು ನೀವು ಹೊರಗೆ ಹೋಗಿಬಿಡಿ ತಡನಾಡಬೇಡಿ ನನ್ನ ಪತಿಯು ಮನೆಗೆ ಬರುವ ವೇಳೆ ಸಮೀಪಿಸಿತು ನೀವು ನನ್ನನ್ನು ಬೀದಿಯ ಜಾರಿಣಿಯೆಂದು ತಿಳಿದು ಒಳಗೆ ಬಂದಿರುವಿರಿ ನಿಮ್ಮದು ತಪ್ಪು ತಿಳುವಳಿಕೆ' ಎಂದು ನಾನು ಹೇಳುವುದನ್ನು ಮಧ್ಯದಲ್ಲಿಯೇ ತಡೆದು 'ನನಗೆ ಈ ಪುರಾಣವನ್ನು ಹೊಸತಾಗಿ ಕಲಿಸಬೇಡ ನನಗೆಲ್ಲವೂ ತಿಳಿದಿದೆ. ನಿನ್ನ ಗಂಡನು ಬಂದರೇನಂತೆ. ಅವನಿಗೆ ಕೊಂಚ ಹಣ ಕೊಟ್ಟುಬಿಡುತ್ತೇನೆ. ಪಕ್ಕದ ಬೀದಿಯಲ್ಲಿರುವ ಪಾನೀಯದಂಗಡಿಗೆ ಹೋಗಿ ಪಾನೀಯವನ್ನು ಸೇವಿಸಿ ಸಾವಕಾಶವಾಗಿ ಮನೆಗೆ ಬರಲಿ' ಎಂದು ಹೇಳುವಾಗ ಎದುರಿಗೆ ನನ್ನ

ಅಲಂಕಾರದ ಮೇಜಿನ ಮೇಲೆ ಇರಿಸಿದ್ದ ನನ್ನ ಗಂಡನ ಫೋಟೋ ನೋಡಿ 'ಅವನೇನು ನಿನ್ನ ಪತಿ?' ಎಂದು ಕೇಳಿದ.

"'ಅಹುದು'

"'ಬಹಳ ಸುಂದರನು ಆದರೆ ನಿನ್ನನ್ನೇತಕ್ಕೆ ಈ ಬಗೆಯ ನೀಚ ವ್ಯವಹಾರಕ್ಕಿಳಿಯುವಂತೆ ಮಾಡಿದನು? ಈ ವೃತ್ತಿಯನ್ನು ಅನುಸರಿಸಲು ಅವನೇತಕ್ಕೆ ಸಮ್ಮತಿಸಿದನು? ಈ ಚಿತ್ರವು ಯಾರದು? ನಿನ್ನ ಸ್ನೇಹಿತಳದೆ?" ಎಂದು ಕೇಳಿದನು

"ಆ ಚಿತ್ರಪಟ ನಿನ್ನದು. ನೀನು ಪೂರ್ಣ ಅಲಂಕೃತಳಾದಾಗ ತೆಗೆದುದು. ಬಹು ಸುಂದರವಾದುದು'' 'ಅಹುದು ಆಕೆ ನನ್ನ ಮಿತ್ರಳು' ಎಂದು ಹೇಳಿ ಸುಮ್ಮನಾದೆ.

"ಬಹು ಸುಂದರ ಇವಳ ರೂಪು ನಿನಗಿಂತಲೂ ಚೆಲುವಿ, ಅವಳ ಪರಿಚಯ ನನಗೊಂದು ಸಲ ಮಾಡಿಕೊಡುವೆಯಾ?" ಎಂದು ಮತ್ತೆ ನಾಚಿಕಿಲ್ಲದೆ ಅವನು ಕೇಳಿದ

"ಮನೆಯಲ್ಲಿಯ ಗಡಿಯಾರದಲ್ಲಿ ಗಂಟೆ ಐದಾದುದನ್ನು ನೋಡಿದೆ ಸರಿಯಾಗಿ ಐದುವರೆಗೆ ನನ್ನ ಪತಿ ಮನೆಗೆ ಬರುವ ಸಮಯ. ಹೊಸಬನು ಹೊರಗೆ ಹೋಗುವುದರ ಮುನ್ನವೇ ನನ್ನಪತಿ ಬಂದರೆ ನನ್ನಗತಿ ಏನಾಗುವುದೆಂದು ಭಯಗೊಂಡೆ—ನನ್ನ ಬುದ್ಧಿ ನನ್ನ ಸ್ವಾಧೀನದಲ್ಲಿರಲಿಲ್ಲ—ಆದುದರಿಂದ ಅವನನ್ನು ಬೇಗ ಹೊರಗೆ ಹೋಗುವಂತೆ ಮಾಡುವುದೇ ಸಂಕಟದಿಂದ ಪಾರಾಗಲು ಮಾರ್ಗವೆಂದು ನೆನೆದೆ. ಅವನ ಕಾಮವಾಸನೆಯನ್ನು ಬೇಗ ಪೂರೈಸುವಂತೆ ನಡೆದುಕೊಂಡರೆ ನನ್ನ ಗುಟ್ಟು ರಟ್ಟಾಗದೆಂದು ನೆನೆದೆ ಅವನಿಗೆ ಸೋತುಹೋದೆ. ಹಾಗೆ ಅವನಿಗೆ ನಾನು ಒಲಿಯದ ಹೊರತು ಅವನನ್ನು ಮನೆಯಿಂದ ಹೊರಗೆ ಕಳಿಸುವ ಮಾರ್ಗ ಬೇರೊಂದಿರಲಿಲ್ಲ."

ಇವಳ ಕತೆಯನ್ನು ಕೇಳುತ್ತ ಮಲಗಿದ್ದ ರೆನಿಡಾನಳು ಸುಮ್ಮನೇ ನಗಹತ್ತಿದಳು. ತನ್ನ ಚೆಲುವಾದ ಮುಖವನ್ನು ತಲೆದಿಂಬುಗಳ ನಡುವೆ ಅಡಗಿಸಿಕೊಂಡು ನಗತೊಡಗಿದಳು ಅವಳ ನಗುವಿನ ಭಾರವು ಕಡಮೆಯಾದ ನಂತರ 'ಮುಂದೇನಾಯಿತು'? ಇರಲಿ, ನಿನ್ನ ಪತಿಗಿಂತಲೂ ಅವನು ಬಹು ಸುಂದರನೆ?

"ಅಹುದು. ಬಹಳ ಸುಂದರನು."

"ಅಂದಮೇಲೆ ನಿನಗೇಕೆ ಈ ಸಂತಾಪ? ಚೆಲುವಿದ್ದಲ್ಲಿ ಒಲವು, ಪ್ರೇಮ ವಿರಲೇಬೇಕು.

"ಹಾಗೆಂದರೇನು ? ನೀನೊಬ್ಬ ಹುಚ್ಚಿ, ಏನೋ ಒಂದು ಸಲ ಬಂದು ಹೋಯಿತು ಶನಿಕಾಟ ತಪ್ಪಿತೆಂದು ನಾನು ಅವನಿಗೊಳಗಾದರೆ 'ಮತ್ತೆ ನಾಳೆ ಬರುವೆ' ಎಂದು ಹೇಳಿರುವನು ಆದುದರಿಂದ ನನಗೆ ಭಯವಾಗುತ್ತಿದೆ. ಅವನೆಂತಹ ಹಟಮಾರಿಯೆಂಬುದು ನೀನರಿಯೆ. ಬಹಳ ಕಷ್ಟ, ಬಹಳ ಕಷ್ಟ ಈ ವಿಪತ್ತಿನಿಂದ ನಾನು ಹೇಗೆ ಪಾರಾಗಬೇಕೋ. ತಿಳಿಯದಂತಿದೆ ಮುಂದೇನು ಮಾಡಲಿ?"

ರೆನಿಡಾನಳು ಹಾಸಿಗೆಯಲ್ಲಿ ಎದ್ದು ಕುಳಿತಳು. ಕೊಂಚ ಸಮಯ ಆಲೋಚಿಸಿ ಕೊನೆಗೊಮ್ಮೆ "ಅವನನ್ನು ಪೋಲೀಸರ ವಶಕ್ಕೆ ಒಪ್ಪಿಸಿದರಾಯಿತು" ಎಂದಳು

"ಅವನನ್ನು ಪೋಲೀಸರ ಕೈವಶ ಮಾಡುವುದೆ ? ಗಲಾಟೆ ಇಲ್ಲದೆ ನಾನೀ ಕೆಲಸ ಹೇಗೆ ಸಾಧಿಸುವುದು ? ಪೋಲೀಸರ ಕೈವಶ ಮಾಡಬೇಕಾದರೆ, ಅವನು ಮಾಡಿದ ಅಪರಾಧವಾದರೂ ಏನು ? ಯಾವ ತಪ್ಪಿಗಾಗಿ ಅವನನ್ನು ಪೋಲಿಸರು ಬಂಧಿಸುವಂತೆ ಮಾಡಬೇಕು ?"

"ಇದೇನಂತಹ ಕಷ್ಟದ ಕೆಲಸ ? ಪೋಲಿಸಕಮೀಷನರ ಕಚೇರಿಗೆ ಹೋಗಿ ಅವನ ಮೇಲೆ ಅಪವಾದವನ್ನು ಹೊರಿಸುವ ಹಂಚಿಕೆಯನ್ನು ಮಾಡುವುದು. ಇಲ್ಲದ ಕತೆಯೊಂದನ್ನು ಕಲ್ಪಿಸುವುದು. ಮೂರು ತಿಂಗಳಿಂದ ನನ್ನ ಮನೆಯ ಹತ್ತಿರ ಬಂದು ಕಾಡುತ್ತಿರುವನು ಬಲವಂತದಿಂದ ನನ್ನ ಮನೆಯಲ್ಲಿ ಪ್ರವೇಶಿಸಿ ಕಾಡಿದನು ಮತ್ತೆ ನಾಳೆ ಬರುವೆನೆಂಬ ಬೆದರಿಕೆ ಹಾಕಿರುವನೆಂದು ಹೇಳಿ ಪೋಲೀಸರ ಸಹಾಯ ಬೇಡು. ನಿನಗೆ ಇಬ್ಬರ ಪೋಲೀಸರ ರಕ್ಷಣೆದೊರೆಯುವುದು. ನಾಳೆ ಅವನು ಬಂದ ಕೂಡಲೇ ಅವರ ವಶಕ್ಕೊಪ್ಪಿಸಿ ಬಿಡು. ಹೀಗೆ ನಡೆದು ಕೊಳ್ಳುವುದು ಸುಲಭವಲ್ಲವೇ?"

"ಸುಲಭ—ಚೆನ್ನಾಗಿ ಹೇಳಿದೆ ಮಹಾರಾಯಳೆ! ಅವನು ನಡೆದ ಕತೆಯನ್ನು ಅವರೆದುರು ವಿವರಿಸಿದರೆ ಮುಂದೇನು ನನ್ನ ಅವಸ್ಥೆ?"

"ಅವರು ಅವನ ಮಾತನ್ನು ನಂಬಲಾರರು, ನೀನೊಬ್ಬ ಮಾನವಂತಳಾದ, ಮದುವೆಯಾದ ಗ್ರಹಿಣಿ. ನಿನ್ನ ಮಾತಿನಲ್ಲಿ ಪೋಲೀಸರು ವಿಶ್ವಾಸ ವಿಡುವರೇ ಹೊರತು, ಬೀದಿಯಲ್ಲಿ ಅಲೆಯುತ್ತಿರುವ ಕಾಮುವ್ಯಾಪಾರಿಯಾದ ಅವನನ್ನು ಯಾರೂ ನಂಬುವುದಿಲ್ಲ. ಈದೇಶದಲ್ಲಿ ಮದುವೆಯಾದ ಗರತಿಯರಿಗೆ ಮರ್ಯಾದೆ ಇದೆ. ಅವರ ಮಾತಿಗೆ ಬೆಲೆ ಇದೆ "

"ಇಂತಹ ಸುಳ್ಳುಹೇಳುವ ಕೆಲಸ ನನ್ನಿಂದ ಸಾಧ್ಯವಿಲ್ಲ ನನಗೆ ಧೈರ್ಯ ಸಾಲದು ನನ್ನಲ್ಲಿ ಆ ಕುಶಲತೆ ಇಲ್ಲ "

"ಹುಚ್ಚಿ, ಹೀಗೆ ಬೆದರಿದರೆ ನಿನ್ನ ಬಾಳು ಹಾಳಾಗುವುದು. ನಿನ್ನ ಜೀವನವು ಸುಖಮಯವಾಗಲಾರದು."

"ಆದರೆ, ಆ ಪೋಲೀಸರ ಎದುರಿನಲ್ಲಿ ನನ್ನನ್ನು ಅವನು ಅವಮಾನಗೊಳಿಸಿದರೆ, ಮುಂದೇನು ಗತಿ ?"

"ನಿನ್ನ ಕೇಸು ಮತ್ತಿಷ್ಟು ಬಲಗೊಳ್ಳುವುದು, ಸಾಕ್ಷಿಪುರಾವೆಗಳು ದೊರೆಯುವುದರಿಂದ ಅವನಿಗೆ ಶಿಕ್ಷೆ ವಿಧಿಸಲ್ಪಡುವುದು ಅವನು ಜೇಲನ್ನು ಸೇರಬೇಕಾಗುವುದು

"ಅವನಿಗೆ ಶಿಕ್ಷೆಯಾಗುವುದೇ ? ಯಾವ ಬಗೆಯ ಶಿಕ್ಷೆ ?"

"ಹೇಳಿದೆನಲ್ಲ ! ಏನು ನಿನ್ನ ದಡ್ಡತನ ? ನಿನ್ನನ್ನು ಅವಮಾನ ಗೊಳಿಸಲು ಯತ್ನಿಸಿದುದಕ್ಕಾಗಿ ಅವನು ನಿನಗೆ ದಂಡ ಕೊಡಬೇಕಾಗುವುದು."

"ನನಗವನಿಂದ ಮಾನನಷ್ಟ ಹಣವು ಬೇರೆ ಬರುವುದೇ ? ಅವನು ಕೋಣೆಯಿಂದ ಹೊರಡುವಾಗ ನನ್ನ ಹಾಸಿಗೆಯ ಮೇಲೆ ಸಾಕಷ್ಟು ಹಣ ಬಿಟ್ಟು ಹೋಗಿರುವನು "

"ಎಷ್ಟರ ಮಟ್ಟಿಗೆ ?"

"ಇಪ್ಪತ್ತು ಫ್ರಾಂಕುಗಳನ್ನು."

"ಅಷ್ಟೇ ಮತ್ತೇನು ಹೆಚ್ಚಿಗೆ ಕೊಡಲಿಲ್ಲವೆ ?"

"ಇಲ್ಲ, ಇಲ್ಲ "

"ಅದು ಬಹಳ ಕಡಮೆ. ನಿನ್ನ ಅಂತಸ್ತಿಗೆ ಅದು ಬಹಳ ಸ್ವಲ್ಪ ನಿನಗೆ ಈ ವ್ಯವಹಾರವೇ ಹೊಸದು. ನಿನ್ನನ್ನು ದೂರಿದರೇನು ಪ್ರಯೋಜನ ?"

"ಇರಲಮ್ಮ, ನಿನ್ನ ಚುಚ್ಚುಮಾತು ಸಾಕುಮಾಡು. ಆ ಹಣವನ್ನು ನಾನು ಹೇಗೆ ಉಪಯೋಗಿಸಲಿ ? "

ರೆನಿಡಾನಳು ಕೊಂಚ ಸಮಯ ಯೋಚಿಸಿ "ಇಲ್ಲಿ ನೋಡು. ತಂಗಿ. ಆ ಹಣದಿಂದ ನಿನ್ನ ಪತಿದೇವನಿಗೆ ಉತ್ತಮ ವಸ್ತುವನ್ನು ಕೊಂಡು ಅವನಿಗೆ ಕಾಣಿಕೆಯಾಗಿ ಕೊಡು. ಹೀಗೆ ಮಾಡಿದರೆ ಆ ಹಣವನ್ನು ಸರಿಯಾಗಿ ಉಪಯೋಗಿಸಿದಂತಾಗುವುದು."

( —The Signal )

———

# ಆನಂದ ಗ್ರಂಥಮಾಲಾ, ಹುಬ್ಬಳ್ಳಿ

ಸರಸ, ಲಲಿತವಾದ ಕತೆ ಕಾದಂಬರಿಗಳನ್ನು, ವಿಶ್ವಸಾಹಿತ್ಯದ ರತ್ನಗಳನ್ನು ಕೊಡಲು ನಿರ್ಧರಿಸಿದೆ

## ಸಂಪಾದಕರು

**ಪಿ. ವೆಂಕೋಬಾಚಾರ್ಯ, ಬಿ.ಎ.ಬಿ.ಟಿ.**

ಚಿತ್ತಾಕರ್ಷಕ, ಮನಮೋಹಕ, ಸುಂದರ ಮುಖಪುಟದೊಂದಿಗೆ, ವಿಶ್ವಸಾಹಿತ್ಯದ ಮುಖ್ಯ ಕತೆಗಾರನಾದ ಮೋಪಸಾ ಬರೆದ ಮನಸ್ಸಿನ ಹುಚ್ಚು ಹಂಬಲಗಳನ್ನು, ಪ್ರೀತಿಯ ಪರಿಪರಿಗಳನ್ನು, ಅಂತಃಕರಣದ ಅಳಿವನ್ನು, ಸ್ತ್ರೀ ಪುರುಷರ ಕಾಮಜೀವನದ ಅಸಂಖ್ಯ ಗುಪ್ತ ತೊಡಕುಗಳನ್ನು, ಯಶಸ್ವಿಯಾಗಿ ಚಿತ್ರಿಸಿರುವ ಕಥಾ ಸಂಕಲನವು ವೆಂಕೋಬಾಚಾರ್ಯರಿಂದ ಬರೆಯಲ್ಪಟ್ಟ "ಅರ್ಪಣ' ಮಾಲೆಯ ಮೊದಲ ಪುಸ್ತಕ ಈಗಾಗಲೇ ಹೊರ ಬಿದ್ದಿದೆ

ಪುಟಗಳು ೧೨೬— ಬೆಲೆ ೧-೮-೦ ಅರ್ಪಣದ ಪ್ರತಿಗಳಿಗೆ ಬೇಗ ಬರೆಯಿರಿ :

ಮಾಲೆಯ ಎರಡನೆಯ ಪುಸ್ತಕ "ಹೂ ಅರಳಿದೆ" – ಪ್ರಸಿದ್ಧ ತೆಲುಗು ಕತೆಗಾರರಾದ ಶ್ರೀ ಗುಡಿಪಾಟಿ, ಕುಟುಂಬರಾವು, ಮುನಿಮಾಣಿಕ್ಯ ನರಸಿಂಹರಾವ್, ಅಡು ಬಾಪಿರಾಜ, ವಿಶ್ವನಾಥ ಸತ್ಯನಾರಾಯಣ, ಕಪ್ಪಗಂಡುಲ ಸತ್ಯನಾರಾಯಣ, ಶ್ರೀಪಾದ ಸುಬ್ರಹ್ಮಣ್ಯಶಾಸ್ತ್ರಿ, ಕೆ. ಕೃಷ್ಣ ಮೂರ್ತಿ, ಇಲ್ಲಿಂದಲ ಸರಸ್ವತಿದೇವಿ, ಬಲಿಕಾಡ ಕಾಂತರಾವು, ಮುಂತಾದ ವರ ಕತೆಗಳ ಸಂಗ್ರಹ ಅಚ್ಚಿನಲ್ಲಿದೆ

ವಾರ್ಷಿಕ ಚಂದಾ: ರೂ. ೫–೪–೦. ೬೦೦ ಪುಟಗಳ ನಾಲ್ಕು ಪುಟಗಳಿಗೆ

ಮಾರಾಟಗಾರರಿಗೆ ಹೆಚ್ಚಿನ ಸವಲತ್ತು : ವಿವರಗಳಿಗೆ ಬೇಗ ಕೆಳಗಿನ ವಿಳಾಸಕ್ಕೆ ಬರೆಯಿರಿ—

**ಪಿ. ವಿ. ಆಚಾರ್ಯ ಬಂಧುಗಳು**

ಸಂಚಾಲಕರು . **ಆನಂದ ಗ್ರಂಥಮಾಲಾ, ಗವಳಿಗಲ್ಲಿ ಹುಬ್ಬಳ್ಳಿ**

# "ಅರ್ಪಣ"ದ ಬಗ್ಗೆ ಅಭಿಪ್ರಾಯಗಳು

ಈ ಅರ್ಪಣದಲ್ಲಿ ಬರುವ ಕತೆಗಳಲ್ಲಿ ಮೋಪಸಾನ ವೈಶಿಷ್ಟಗಳು ಒಡೆದು ಕಾಣುತ್ತದೆ . .ಮೋಪಸಾ ಜನತೆಯ ಕತೆಗಾರನಾಗಿದ್ದಾನೆ .. ಕನ್ನಡ ಜನತೆಗೆ ಹಿರಿಯ ಸಾಹಿತಿಯ ಹೊಸ ಕತೆಗಳನ್ನು ತಂದುಕೊಟ್ಟ ಶ್ರೀ ಪಿ. ವೆಂಕೋಬಾಚಾರ್ಯರು ಅಭಿನಂದನೆಗೆ ಅರ್ಹರಾಗಿದ್ದಾರೆ— ಕನ್ನಡ ಜನತೆಯು ಮೋಪಸಾನ ಕೃತಿಗಳನ್ನು ಸ್ವಾಗತಿಸುವುದು.

**ವಿಶಾಲ ಕರ್ನಾಟಕ**

—❖—

ಗೆಳೆಯ ವೆಂಕೋಬಾಚಾರ್ಯರು ಅನುವಾದ ಕೃಷಿಯಲ್ಲಿ ಕೈಪಳಗಿದವರು ಎಂಬುವದಕ್ಕೆ ಈ ಕಥಾಸಂಕಲನ ಉದಾಹರಣೆಯಾಗಿದೆ ಈ ಕತೆಗಳ ಭಾಷೆ ಸಹಜ ಸರಳವೂ ನಿರಾಡಂಬರವಾದುದೂ ಆಗಿದೆ—ಮನಸಿನ ಹುಚ್ಚು ಹಂಬಲದ ಕತೆಗಳೂ ಮನೋವೈಜ್ಞಾನಿಕ ವಿಶ್ಲೇಷಣ ಕತೆಗಳೂ, ಪ್ರೀತಿಯ ಪರಿಪರಿಯನ್ನೂ, ಅಂತಃಕರಣದ ಅರಿವನ್ನೂ ಜೀವನದ ಸುಖಾಂತ-ದುಃಖಾಂತ ಪರಿಣಾಮಗಳನ್ನೂ, ನೀತಿಯ ಮಹತಿಯನ್ನೂ, ಚಿತ್ರಿಸುವ ವಿಷಯ ವೈವಿಧ್ಯತೆಯ ಕತೆಗಳು ಈ ಸಂಕಲನದಲ್ಲಿವೆ

**—ಜಯಹಿಂದ್**

—❖—

'ಅರ್ಪಣ'ದ ಕತೆಗಳ ಆಯ್ಕೆ ವೈವಿಧ್ಯ ಪೂರ್ಣವಾಗಿದೆ— ಶ್ರೀ. ವೆಂಕೋಬಾಚಾರ್ಯರ ಮಾತಿನಲ್ಲಿ ವಿಶ್ವಸಾಹಿತ್ಯದ ರತ್ನಗಳು ಅರಳಲೆಂದು ಹಾರೈಸುತ್ತೇವೆ.

**—ಕರ್ಮವೀರ**

—❖—

ಸ್ತ್ರೀ ಪುರುಷರ ಕಾಮಜೀವನದಲ್ಲಿ ಅಸಂಖ್ಯ ಗುಪ್ತ ತೊಡಕುಗಳಿವೆ. ಅವುಗಳ ನೈಜ ಚಿತ್ರಣವನ್ನು ಮೊಪಸಾನಷ್ಟು ಯಶಸ್ವಿಯಾಗಿ ಮಾಡಿದ